







**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪



**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭

ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭ ಜನವರಿ ೨೦೦೧ ಸಂಚಿಕೆ : ೧

## ಒಳಪುಟಗಳಲ್ಲಿ .....



ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೫೦೦/- |
| ಬಿಡಿ ಪ್ರತಿ | ರೂ. ೫.೦೦ |





## ನೆನಪಾಗಿ ಉಳಿದುಹೋದ ಘಟನೆಗಳು......

ಕಾಲಚಕ್ರ ಉರುಳುತ್ತಲೇ ಇದೆ. ಸುಖದುಃಖಗಳು ಜೊತೆಜೊತೆಯಾಗಿಯೇ ಹೆಜ್ಜೆ ಹಾಕುತ್ತಿವೆ. ಬದಲಾವಣೆಗಳು ಜೀವಂತಿಕೆಯ ಲಕ್ಷಣಗಳಾಗಿ ಹೊರಳುತ್ತಿವೆ. ಜಾಗತಿಕ ಜೀವನ ದಿನದಿನ ಕ್ಷಣಕ್ಷಣ ವಿಸ್ಮಯಗಳನ್ನು ಸೃಷ್ಟಿಸುತ್ತಿದೆ. ನಿನ್ನೆಯಂತೆ ಇಂದಿಲ್ಲ, ಇಂದಿನಂತೆ ನಾಳೆ ಬರದು ಎಂಬ ಸತ್ಯ ನಿತ್ಯವಾಗುತ್ತಿದೆ.

೨೦೦೦ದ ವರ್ಷ ಇನ್ನೆಂದೂ ಬರದು. ಮರೆಯಾಯಿತು, ತನ್ನ ಒಡಲಾಳದಲ್ಲಿ ಘಟನೆಗಳನ್ನು ತುಂಬಿಕೊಂಡು ಹೋದುದಾಯಿತು. ಸಾವುನೋವುಗಳನ್ನು ಕಾಣಿಸಿ ಹೋಯಿತು. ಕರ್ನಾಟಕ ಕಂಡ ಅಪರೂಪದ, 'ಚಿನ್ನದಂಥ ಮನುಷ್ಯ' ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು ದಿವಂಗತರಾದರು. ವಿಶಿಷ್ಟ ವರ್ಣರಂಜಿತ ವ್ಯಕ್ತಿತ್ವದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಜೆ.ಹೆಚ್. ಪಟೇಲರು ಕಾಲವಶರಾದರು. ಸಾಹಿತ್ಯ ಲೋಕದ ಪ್ರತಿಭಾವಂತ ಪ್ರೊ. ಎಸ್.ವಿ. ಪರಮೇಶ್ವರಭಟ್ಟರು, ಅಂಕಣಕಾರರೆಂದೇ ಪ್ರಸಿದ್ಧರಾದ ಧೀಮಂತ ಡಾ. ಹಾ.ಮಾ. ನಾಯಕರು ನಿಧನರಾದರು. ಸ್ಥಳೀಯರಾದ ಜನಾನುರಾಗಿಗಳಾದ ಮಾಜಿ ಸಚಿವ ಶ್ರೀ ಲಕ್ಷ್ಮೀನರಸಿಂಹಯ್ಯನವರು ಅಗಲಿದರು. ಸಿದ್ಧಗಂಗಾ ಅಶ್ರುತರ್ಪಣದ ಮೂಲಕ ಎಲ್ಲ ಹಿರಿಯರ ಆತ್ಮಕ್ಕೆ ಗೌರವ ಸಲ್ಲಿಸಿತು.

ಡಾ॥ ರಾಜಕುಮಾರ್ ಅವರ ಅಪಹರಣದ ಪ್ರಸಂಗ ಕರ್ನಾಟಕ-ತಮಿಳುನಾಡಿನ ಜನತೆಯ, ಸರ್ಕಾರದ ನಿದ್ದೆ ಕೆಡಿಸಿತು. ಕುಖ್ಯಾತ ವೀರಪ್ಪನ್ ಸುದ್ದಿಮಾಧ್ಯಮಗಳ ಪ್ರಮುಖ ವಿಷಯವಾದ. ಸರ್ಕಾರ, ನ್ಯಾಯಾಂಗದ ನಿರ್ಣಯವನ್ನು ಗೌರವಿಸಿತು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆಡಳಿತ ಸೂತ್ರ ಹಿಡಿದವರಿಗೆ ತಾಳ್ಮೆ ಎಷ್ಟಿದ್ದರೂ ಸಾಲದು ಎಂಬುದನ್ನು ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಸಾಬೀತುಗೊಳಿಸಿದರು. ಕಲಾವಿದ ರಾಷ್ಟ್ರದ ಸಂಪತ್ತು ಎಂಬುದನ್ನು ಡಾ॥ ರಾಜ್ ಅವರ ಪ್ರಕರಣ ತೋರಿಸಿಕೊಟ್ಟಿತು.

ಮಳೆಯ ವಿಶೇಷದಿಂದಾಗಿ ಜನಜಾನುವಾರುಗಳು ಸಾವುನೋವು ಕಂಡದ್ದಾಯಿತು. ರೈತರ ಅಳಲು ಬೆಳೆಗೆ ಸೂಕ್ತ ಬೆಲೆ ಸಿಕ್ಕದೆ ಪ್ರತಿಭಟನೆಗೆ ದಾರಿಯಾಯಿತು. ಜಗತ್ತಿನ ಶ್ರೀಮಂತ ರಾಷ್ಟ್ರ ಅಮೆರಿಕದ ಅಧ್ಯಕ್ಷ ಸ್ಥಾನಕ್ಕೆ ನಡೆದ ಚುನಾವಣೆ ನ್ಯಾಯಾಂಗದ ಮೆಟ್ಟಿಲೇರಿ 'ಬುಷ್' ಅವರು ವಿಜೇತರು ಎಂದು ಘೋಷಣೆ ಮಾಡಲಾಯಿತು. ಸಾಲದ ಭಾರ ರಾಷ್ಟ್ರ, ರಾಜ್ಯಗಳಿಗೆ ಹೊರೆಯಾಗಿ ಪ್ರಗತಿ ಹೇಗೆ? ಎಂಬಂತಾಗಿದೆ. ಪ್ರತಿ ಭಾರತೀಯ ಗಂಭೀರ ಚಿಂತನೆ ಮಾಡಬೇಕಾಗಿದೆ. ರಾಷ್ಟ್ರದ ಅಭಿವೃದ್ಧಿಗಾಗಿ ದುಡಿಯಬೇಕಾಗಿದೆ. ಕೊನೆಯ ಪಕ್ಷ ಇನ್ನು ಹತ್ತು ವರ್ಷಗಳಾದರೂ ಯಾವುದೇ ವಿಧವಾದ ಮುಷ್ಕರಗಳು ಘಟಿಸದಂತೆ, ಕರ್ತವ್ಯಮುಖಿಗಳಾಗಿ ಹೆಜ್ಜೆಹಾಕಬೇಕಾಗಿದೆ. ಲೋಕಸಭೆ, ರಾಜ್ಯಸಭೆ, ವಿಧಾನಸಭೆ, ವಿಧಾನಪರಿಷತ್ತುಗಳ ಸದಸ್ಯರು ನಿಮಿಷ ನಿಮಿಷಾರ್ಧವನ್ನು ವ್ಯರ್ಥಮಾಡದೆ, ಸಾರ್ವಜನಿಕರ ಹಣವನ್ನು ಸದುಪಯೋಗ ಮಾಡುವ ಸಂಕಲ್ಪ ಮಾಡಬೇಕಾಗಿದೆ. ಅಧಿವೇಶನಗಳಲ್ಲಿ ಅಮೂಲ್ಯ ಕಾಲವನ್ನು ಹರಣ ಮಾಡದೆ ಮೂಲಭೂತ ಸೌಕರ್ಯಗಳನ್ನು ಪ್ರತಿಪ್ರಜೆಗೆ ಒದಗಿಸಿಕೊಡುವ ಯೋಜನೆಗಳನ್ನು ರೂಪಿಸುವ ಅಗತ್ಯವಿದೆ.

೨೦೦೧ ಬಂದಿದೆ. ಸ್ವಾಗತ. ೨೦೦೦ಕ್ಕೆ ಬೀಳ್ಕೊಡುಗೆ. 'ಸಿದ್ಧಗಂಗಾ' ಪತ್ರಿಕೆ ಮುನ್ನಡೆಯಲು ಸಹಕರಿಸುತ್ತಿರುವ ಎಲ್ಲರಿಗೆ ವಂದನೆಗಳು. ಹೊಸ ವರ್ಷಕ್ಕೆ ಶುಭಾಶಯಗಳು.

- ಸಂಪಾದಕ









## ಅಮೂಲ್ಯ ನಿಧಿ

ನೀವೆಲ್ಲ ಶ್ರೀಮಠದ ಅಮೂಲ್ಯನಿಧಿಗಳಾಗಿದ್ದೀರಿ. ಸಂಸ್ಥೆಯ ಒಳಿತನ್ನೇ ಸದಾ ಚಿಂತನೆ ಮಾಡುತ್ತಿರುವ ನಿಮ್ಮನ್ನು ನೋಡುವುದೆ ನಮಗೆ ಸಂತೋಷ. ಶ್ರೀಕ್ಷೇತ್ರದ ಕಿಂಚಿತ್ ಉಪಕಾರವನ್ನು ಅತ್ಯದ್ಭುತವಾಗಿ ಪವಿತ್ರಭಾವನೆಯೊಂದಿಗೆ ಸ್ಮರಿಸುತ್ತಿರುವ ನಿಮ್ಮಲ್ಲಿ ಪ್ರಸಾದತತ್ವ ಅರಳಿರುವುದು ಸ್ಮರಣೀಯವೆನಿಸುತ್ತದೆ. ನೀವೆಲ್ಲ ಮಠದಲ್ಲಿ ಆಶ್ರಯಪಡೆದ ದಿನಗಳು ಈಗಿನಷ್ಟು ಸುಖದ ದಿನಗಳಾಗಿರಲಿಲ್ಲ. ಆದರೆ ನಿಮ್ಮ ಅಭಿಮಾನ ಸಂಸ್ಥೆಯ ಜೀವದ್ರವ್ಯವಾಗಿ ಬೆಳೆದುಬಂದಿರುವುದನ್ನು ಕಂಡಾಗ ನಮಗಾಗುವ ಆನಂದ ಹೆಚ್ಚಿನದು.

ಶ್ರೀಮಠದ ನಿರಂತರ ಸೇವೆಗಾಗಿ ನೀವು ರೂಪಿಸಿರುವ, ರೂಪಿಸುತ್ತಿರುವ ಯೋಜನೆಗಳ ಹಿಂದೆ ನಿಮ್ಮ ಸುಸಂಸ್ಕೃತ ಜೀವನ ಮೌಲ್ಯಗಳನ್ನು ನಾವು ಕಾಣುತ್ತಿದ್ದೇವೆ. ಆ ಯೋಜನೆಗಳು ಮಹಾದಾಸೋಹ ನಿಧಿ, ಶತಮಾನೋತ್ಸವ ನಿಧಿ, ಗದ್ದುಗೆಗಳ ನಿತ್ಯ ರುದ್ರಾಭಿಷೇಕ ನಿಧಿ, ಮಾಸಪತ್ರಿಕೆಯ ಆಜೀವ ಸದಸ್ಯತ್ವ ನಿಧಿ, ಸಿದ್ಧಗಂಗಾ ಅಭಿವೃದ್ಧಿ ನಿಧಿ ಮುಂತಾಗಿ ಸಾಕಾರಗೊಳ್ಳುವಲ್ಲಿ ನಿಮ್ಮ ಆಸಕ್ತಿ, ಸಹಕಾರಗಳನ್ನು ಗಮನಿಸಿದಾಗ ಸ್ವಾಮಿಗಳು ಹೇಳಿದಂತೆ (ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು) ನೀವೇ 'ಅಮೂಲ್ಯನಿಧಿ'ಗಳೆಂಬುದನ್ನು ನಾವೂ ಕೂಡ ಸಂತೋಷವಾಗಿ ನೆನೆಯುತ್ತೇವೆ.

ನಿಮ್ಮಲ್ಲಿ ಕೆಲವರು ಪ್ರಸ್ತಾಪಿಸಿದಿರಿ, ನಮಗೆ ಸರ್ಕಾರ, ಭಾರತರತ್ನ ಪ್ರಶಸ್ತಿ ಮೂಲಕ ಗೌರವಿಸಬೇಕು ಎಂಬುದಾಗಿ. ನಮಗೆ ಬಿರುದುಗಳಾಗಲಿ, ಪ್ರಶಸ್ತಿಗಳಾಗಲಿ ಬೇಕಿಲ್ಲ. ಶ್ರೀಮಠದ ಆಶ್ರಯಪಡೆದ ವ್ಯಕ್ತಿ ಸುಸಂಸ್ಕೃತನಾಗಿ, 'ಮಾನವ'ನಾಗಿ ರಾಷ್ಟ್ರದ ಸೇವೆಯನ್ನು ಪ್ರಾಮಾಣಿಕವಾಗಿ ಮಾಡುವುದೇ ಮುಖ್ಯವಾದುದು. 'ಮಹಾತ್ಮ' ಎಂಬುದನ್ನು ಗಾಂಧೀಜಿಯವರಿಗೆ ಯಾವ ಸರ್ಕಾರ ಕೊಟ್ಟಿದ್ದಲ್ಲ. ಭಾರತದ ಜನಸಮಸ್ತಕೋಟಿ ಪ್ರೀತಿಯಿಂದ ಕೊಟ್ಟ ಗೌರವ, ಪ್ರೀತಿಯ ನುಡಿ. ಸಿದ್ಧಗಂಗಾ ಮಠದ ಸಂಸ್ಕೃತಿ ದಾಸೋಹ ಸಂಸ್ಕೃತಿ ಎಂಬುದನ್ನು ಪ್ರಸ್ತಾಪಿಸಿದಿರಿ. ಸತ್ಯವನ್ನೇ ಆಡಿದ್ದೀರಿ. ಬಸವಾದಿ ಪ್ರಮಥರ ಪರಂಪರೆಯಲ್ಲಿ ಅರಳಿದ ಶ್ರೀಮಠ ಕಾಯಕ-ದಾಸೋಹಗಳ ಹಳಿಗಳ ಮೇಲೆ ಚಲಿಸುತ್ತಿರುವ 'ಚಲನಶೀಲ' ತತ್ವಾಧಾರಿತ ಸಂಸ್ಥೆ. ಶ್ರೀಮಠಕ್ಕೆ ಜಾತಿಯ ಸೋಂಕಿಲ್ಲ. ಅದರಲ್ಲಿ ನಮಗೆ ನಂಬಿಕೆಯಿಲ್ಲ. ನಮಗೆ ಮುಖ್ಯವಾಗಿರುವುದು ನೀವೆಲ್ಲ ಭಾರತೀಯ ಕುಟುಂಬಕ್ಕೆ ಸೇರಿದವರೆಂಬುದು.

ಇನ್ನೊಂದು ಮಾತನ್ನಿಲ್ಲಿ ಸ್ಪಷ್ಟಪಡಿಸಬೇಕಾಗಿದೆ. ಇಂದು ಎಲ್ಲೆಲ್ಲಿಯೂ 'ಸೇವೆ'ಯೆಂಬ ಮಾತು ಜನಪ್ರಿಯವಾದ ಸವಿನುಡಿಯಾಗಿದೆ. ಆದರೆ 'ಸೇವೆ' ಎಂಬುದು ಪ್ರಚಾರದ ಸರಕಲ್ಲ. ಅದು ಗುಪ್ತಶಕ್ತಿ. ವ್ಯಕ್ತಿಯನ್ನು 'ಆರೋಗ್ಯ'ವಂತನನ್ನಾಗಿಡುವ ಜೀವನ ವಿಧಾನ. ನಮ್ಮ ಪೂಜ್ಯ ಗುರುಗಳು ನಮಗೆ ಕಲಿಸಿದ ಪಾಠವೆಂದರೆ ಸದಾ ಕ್ರಿಯಾಶೀಲವಾಗಿರುವ ಜೀವನ ಭಾಗ್ಯ. ಶ್ರೀಮಠದಲ್ಲಿರುವ ಮಕ್ಕಳು ದಡ್ಡರಲ್ಲ, ಬುದ್ಧಿವಂತರು, ಸೌಲಭ್ಯದ ಅಭಾವದಿಂದ ಅವರಲ್ಲಿರುವ ಪ್ರತಿಭೆ ಪ್ರಕಟವಾಗಲು ಆಗಿಲ್ಲ. ನಿಮ್ಮಲ್ಲಿ ಅನೇಕರು ಶಿಕ್ಷಕರಾಗಿ ಒಳ್ಳೆಯ ಹೆಸರು ಗಳಿಸಿದವರಿದ್ದೀರಿ. ಕೆಲವರೀಗ ನಿವೃತ್ತರಾಗಿದ್ದೀರಿ. ನಿವೃತ್ತಿಯ ಸಮಯವನ್ನು ಹಲವಾರು ವಿಧದಲ್ಲಿ ಕಳೆಯುತ್ತಿದ್ದೀರಿ. ನೀವು ಮನಸ್ಸು ಮಾಡಿದ್ದೇ ಆದರೆ, ಶ್ರೀಮಠದಲ್ಲಿ ವ್ಯಾಸಂಗ ಮಾಡುತ್ತಿರುವ ಅನಾಥ, ಬಡ ಮಕ್ಕಳಿಗೆ ನಿಮ್ಮ ನಿಮ್ಮ ಬೋಧನ ವಿಷಯಗಳಲ್ಲಿ ಗಳಿಸಿದ ಅನುಭವ ಮಾರ್ಗದರ್ಶನವನ್ನು ಕೊಡುವುದರ ಮೂಲಕ ಪವಿತ್ರ ಸೇವೆಯನ್ನು ಮಾಡಬಹುದು. ಅದೊಂದು ಎಲ್ಲ ನಿಧಿಗಳಿಗಿಂತಲೂ ಅತ್ಯಪೂರ್ವವಾದ 'ಮಂಗಳಯೋಜನೆ'ಯಾಗುವುದರಲ್ಲಿ ಸಂದೇಹವಿಲ್ಲ.

ಮತ್ತೊಂದು ಮಾತು ಸಂಸ್ಥೆಯ ಸೇವಾ ಮಣಿಹ ನಿರಂತರವಾಗಿ ಮುಂದುವರಿಯಬೇಕೆಂಬ ಮಹೋದ್ದೇಶದಿಂದ ನೀವು ನಿಮ್ಮ ಆದಾಯದಲ್ಲಿ ಪ್ರತಿಶತ ಒಂದರಷ್ಟನ್ನಾದರೂ ಅಂದರೆ ಶೇಕಡಾ ಒಂದು ಪರ್ಸೆಂಟು ಹಣವನ್ನು ಕೊಡಬೇಕೆಂದು ಸರ್ವಾನುಮತದಿಂದ ನಿರ್ಣಯಿಸಿದ್ದೀರಿ. ಸಂತೋಷ. ಆದರೆ ಯಾರೂ ಯಾವುದೇ ವಿಧವಾದ ತೊಂದರೆಯುಂಟಾಗದ ರೀತಿಯಲ್ಲಿ, ಕೌಟುಂಬಿಕ ಅಡಚಣೆಯಾಗದ ರೀತಿಯಲ್ಲಿ ಸಹಕರಿಸಬೇಕೆಂಬುದೇ ನಮ್ಮ ಅಭಿಪ್ರಾಯ. ಇಂಥ ಒಂದು 'ಸಂಪ್ರದಾಯ' ಬೆಳೆದುಬರುವುದಾದರೆ ಶ್ಲಾಘನೀಯ.

(ದಿನಾಂಕ ೩೧.೧೨.೨೦೦೦ ದಂದು ಶ್ರೀಮಠದಲ್ಲಿ ಸಮಾವೇಶಗೊಂಡಿದ್ದ ಹಳೆಯ ವಿದ್ಯಾರ್ಥಿಗಳ ಸಂಘದ ಮಹಾಧಿವೇಶನದಲ್ಲಿ ನೀಡಿದ ಅನುಗ್ರಹ ಭಾಷಣದಿಂದ ಆಯ್ದಭಾಗ)

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಘೃತ ಘೃತವ ಬೆರಸಿದಂತೆ,
ಕ್ಷೀರ ಕ್ಷೀರವ ಬೆರಸಿದಂತೆ,
ತೈಲ ತೈಲವ ಬೆರಸಿದಂತೆ,
ನೀರು ನೀರ ಬೆರಸಿದಂತೆ,
ಜ್ಯೋತಿ ಜ್ಯೋತಿಯ ಬೆರಸಿದಂತೆ,
ಬಯಲು ಬಯಲ ಬೆರಸಿದಂತೆ,
ಪ್ರಾಣ ಪ್ರಾಣ ಸಂಯೋಗವಾದ
ಶರಣಲಿಂಗ ಸಮರಸವನೇನೆಂಬೆನಯ್ಯಾ
ಮಹಾಲಿಂಗುರು ಶಿವಸಿದ್ಧೇಶ್ವರ ಪ್ರಭುವೇ ।

ಪರಶಿವನು ತನ್ನ ಲೀಲಾ ವಿನೋದಕ್ಕಾಗಿ ದ್ವೈತ ಭಾವವನ್ನು ತಾಳಿ, ಶರಣ ಲಿಂಗ ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತಿದ್ದರೂ ಕೊನೆಗೆ ಆತನು ಎರಡೆಂಬುದನ್ನು ತೊರೆದು ಒಂದೇಯಾಗಿ ಬಿಡುವನು. ತುಪ್ಪತುಪ್ಪದಲ್ಲಿ, ಹಾಲು ಹಾಲಿನಲ್ಲಿ, ಎಣ್ಣೆ ಎಣ್ಣೆಯಲ್ಲಿ, ನೀರು ನೀರಿನಲ್ಲಿ, ಜ್ಯೋತಿ ಜ್ಯೋತಿಯಲ್ಲಿ, ಬಯಲು ಬಯಲಿನಲ್ಲಿ ಕೂಡಿದಂತೆಯೇ - ಶರಣನು ಲಿಂಗದಲ್ಲಿ ಕೂಡಿ ಸಮರಸಭಾವವನ್ನು ಹೊಂದುವನು. ಅಂತಹ ಸಮರಸ ಸ್ಥಿತಿಯು ಹೇಳಲಿಕ್ಕೆ ಬಾರದ ಶಬ್ದ ಮುಗ್ಧಸ್ಥಿತಿಯಾಗುವುದು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜ್ಞಾನಾಚಾರದೊಳಗೆ ಅಂಗ ಲಿಂಗಗೊಳಿಸಿ
ಸರ್ವಾಂಗ ಲಿಂಗ ಸಮರಸದಿ । ಬೆಳಗಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮುಖವು ಲಿಂಗದೆಡೆಗೆ ಮನವು ಲಿಂಗದೊಳಗೆ
ಭಾವ ಸರ್ವವೆಲ್ಲ ಲಿಂಗಮಯ । ಗೊಳಿಸಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎನ್ನ ಭಕ್ತಿಯ ತಂದೆ ನಿಮ್ಮ ಧರ್ಮವೆಂದೆ
ಎನ್ನ ಜ್ಞಾನತಂದೆ ತವಕೃಪೆಯು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದನೇಸರಸಿಂಧು ಬೋಧ ಭಾಸ್ಕರಬಂಧು
ಶರಣಸಿದ್ಧಾಂತ ಜಯಬಂಧು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಾನಂದ ಗುರುವೆ ಶೀಲಾನಂದ ಪ್ರಭುವೆ
ಸಾನಂದ ದಾಸೋಹ ಶ್ರೀ ಶಿವವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯ ಕರಣವ ಗೆದ್ದು ಹಸಿವು ತೃಷೆಗಳ ಗೆದ್ದು
ಮನವ ಮಂಗಳಮಾಡಿ ನಗುತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಾಣಿಯಲಿ ಉರಿಲಿಂಗ ಭಾವದಲಿ ಶಿವಲಿಂಗ
ಲೋಕಪಾವನ ಚರಿತ ನಿಘನಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಯೋಗ ಶಾಂತವೆ ಭವಯೋಗದ ಸೋಜಿಗವೆ
ಶಿವಭವದ ಸಮರಸ ನೂತನವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದ್ವಂದ್ವ ಭಾವವನಳಿದ ಸಿರಿದಮ ಶ್ರೇಷ್ಠವೆ
ಅಹಮಿಕೆ ತೊರೆದಿರುವ ನಿರ್ಮಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ದೇಹ ನಿರ್ಮಲವೆ ನಿರುಪಮ ನಿರಂಜನವೆ
ನಿರಾಲಂಬ ನಿಷ್ಕಳ ನಿಜದಿರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ







# ಗಣರಾಜ್ಯ

- ಗೊ.ರು. ಚನ್ನಬಸಪ್ಪ,
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು-೮೨

ನಮ್ಮದು ಸಂವಿಧಾನಬದ್ಧ ಗಣರಾಜ್ಯ. ಅಂದರೆ ಜನರಾಜ್ಯ. ಇದನ್ನೇ ಸಂವಿಧಾನಬದ್ಧ 'ಪ್ರಜಾಸತ್ತಾತ್ಮಕ ಗಣರಾಜ್ಯ' ಎಂದು ಕರೆದಿದ್ದೇವೆ. ಭಾರತದ ಸಂವಿಧಾನ ಇದ್ದಕ್ಕಿದ್ದಂತೆ ರಚನೆಯಾದುದಲ್ಲ. ಸುದೀರ್ಘ ಅಧ್ಯಯನ ಅನುಭವಗಳ ಆಧಾರದ ಮೇಲೆ ರೂಪುಗೊಂಡದ್ದು. ಇಲ್ಲಿನ ವೈವಿಧ್ಯಪೂರ್ಣ ಪರಂಪರೆ, ಪದ್ಧತಿ, ಭಾಷೆ, ಪ್ರದೇಶಗಳ ಪ್ರತಿನಿಧಿಗಳೆಲ್ಲ ಕೂಡಿ ನೆಯ್ದ ಘಟನಾವಳಿ. ವಿಶ್ವದ ನಾನಾ ರಾಷ್ಟ್ರ ಸಂವಿಧಾನಗಳ ಮಹತ್ವದ ಅಂಶಗಳನ್ನು ಸಂಯೋಜಿಸಿ ಭಾರತೀಯ ಬದುಕಿಗೆ ಹೊಂದಿಕೊಳ್ಳುವಂತೆ ಇದರ ರಚನೆಯಾಗಿದೆ.

ಭಾರತ ಪ್ರಜಾಪ್ರಭುತ್ವ ಇಡೀ ವಿಶ್ವದಲ್ಲೇ ದೊಡ್ಡದು. ಗಾತ್ರದಲ್ಲಷ್ಟೇ ಅಲ್ಲ; ಪಾತ್ರದಲ್ಲೂ ಕೂಡ. ನಮ್ಮ ಸಂವಿಧಾನ ರಚನೆಯಾದದ್ದು ೧೯೪೯ರಲ್ಲಿ. ಅಧಿಕೃತವಾಗಿ ಜಾರಿಗೆ ಬಂದದ್ದು ೧೯೫೦ರ ಜನವರಿ ೨೬ ರಂದು. ಆದರೆ ಇದರ ರಚನಾಕಾರ್ಯ ಕುಡಿಯೊಡೆಯತೊಡಗಿದ್ದು ೧೮೫೮ರಷ್ಟು ಹಿಂದೆ. ಆಗ ಬ್ರಿಟಿಷ್ ಇಂಡಿಯಾ ಕಂಪನಿಯ ಕಾನೂನಾಗಿ ರೂಪುಗೊಂಡು ನಂತರ ಸುಮಾರು ೯೦ ವರ್ಷಗಳ ಅವಧಿಯಲ್ಲಿ ಭಾರತ ಸ್ವಾತಂತ್ರ್ಯ ಹೋರಾಟದ ಫಲವಾಗಿ ಅನೇಕ ಬದಲಾವಣೆಗಳನ್ನು ಕಂಡಿದೆ. ೧೮೬೧ರಲ್ಲಿ ಹಿಂದಿನ ಕಾನೂನಲ್ಲಿ ಮೊದಲು ಸುಧಾರಣೆಯಾಯಿತು. ನಂತರ ೧೮೯೨, ೧೯೦೯, ೧೯೧೫, ೧೯೧೭, ೧೯೧೯, ೧೯೨೭, ೧೯೨೯, ೧೯೩೦, ೧೯೩೫, ೧೯೩೭, ೧೯೪೬ ಹೀಗೆ ವಿವಿಧ ಹಂತಗಳಲ್ಲಿ ಆಡಳಿತ ವಿಕೇಂದ್ರೀಕರಣ ಮತ್ತು ಸ್ವಾಯತ್ತ ಪ್ರಭುತ್ವದ ಕಾನೂನು ಸುಧಾರಣೆಯಾಗುತ್ತ ಬಂದು, ೧೯೪೭ರ ಜುಲೈ ೧೮ರಂದು ಸೇರಿದ್ದ ರಾಷ್ಟ್ರೀಯ ಮಂಡಳಿಯ ಅಧಿವೇಶನದಲ್ಲಿ ಸ್ವಾಯತ್ತ ಶಾಸನ ಸಭೆಗಳಿಗೆ ಪರಮಾಧಿಕಾರ ನೀಡುವ ವಿಧೇಯಕ ಅಂಗೀಕೃತವಾಯಿತು. ಅದೇ ಆಗಸ್ಟ್ ೨೯ರಂದು ಸ್ವತಂತ್ರ ಭಾರತದ ಸಂವಿಧಾನ ಕರಡು ರಚನಾ ಸಮಿತಿ ರೂಪುಗೊಂಡು ೧೯೪೮ರಲ್ಲಿ ಆ ಸಮಿತಿಯು ಕರಡು ಪ್ರಕಟಿಸಿತು. ನಂತರ ಹಲವಾರು ಬಾರಿ ಸಭೆ ಸೇರಿ ಆ ಕರಡನ್ನು ವಿವರವಾಗಿ ಪರಿಶೀಲಿಸಲಾಯಿತು. ೧೯೪೯ರ ನವೆಂಬರ್ ೨೬ರಂದು ಅಂತಿಮ ವಾಚನ ಮತ್ತು ಪರಿಶೀಲನೆ ಮುಗಿದು ಅಂದೇ ಸಂವಿಧಾನ ಸಭೆಯ ಅಧ್ಯಕ್ಷರ ಅಂಗೀಕಾರವಾಯಿತು.

೧೯೫೦ರ ಜನವರಿ ೨೬ರಂದು ಸ್ವತಂತ್ರ ಭಾರತ ತನ್ನದೇ ಆದ ಅಧಿಕೃತ ಸಂವಿಧಾನವನ್ನು ಅನುಷ್ಠಾನಗೊಳಿಸಿತು. ನಮ್ಮ ಸಂವಿಧಾನದ ಪೀಠಿಕೆಯಲ್ಲಿ ರಾಜಕೀಯ ನ್ಯಾಯಕ್ಕೆ ಭದ್ರತೆ, ರಾಷ್ಟ್ರೀಯ ವ್ಯವಸ್ಥೆಯಲ್ಲಿ ಎಲ್ಲರ ಪಾಲು, ಪ್ರೌಢ ಮತದಾನ ಪದ್ಧತಿ - ಇವುಗಳಿಗೆ ಮುಕ್ತ ಅವಕಾಶ ಕಲ್ಪಿಸಲಾಗಿದೆ. ಧರ್ಮ, ಜನಾಂಗ, ಲಿಂಗ, ಭಾಷೆ, ಜನ್ಮಸ್ಥಳಗಳ ಭೇದ ಭಾವಕ್ಕೆ ಅವಕಾಶವಿಲ್ಲದ 'ಪ್ರಜಾಪ್ರಭುತ್ವವಾದಿ ಗಣರಾಜ್ಯ' ನಮ್ಮದಾಗಿದೆ.

ನಮ್ಮ ಸಂವಿಧಾನ, ನಾನು ಮೊದಲೇ ಹೇಳಿದಂತೆ, ಸುದೀರ್ಘ ಚರ್ಚೆ ಮತ್ತು ಅನುಭವಗಳ ಒಂದು ಮಹತ್ವಪೂರ್ಣ ದಾಖಲೆ. ಇದರಲ್ಲಿ ಸಂಪತ್ತಿನ ಸಾರ್ವಭೌಮತೆ ಮತ್ತು ನ್ಯಾಯಾಂಗದ ಶ್ರೇಷ್ಠತೆಗಳ ಮಧ್ಯೆ ತುಂಬ ಅರ್ಥಪೂರ್ಣ ಹೊಂದಾಣಿಕೆಯಿದೆ. ಮೂಲಭೂತ ಹಕ್ಕುಗಳ ಬಗೆಗೆ ಸಾಕಷ್ಟು ವಿವರವಾಗಿ ವಿಶ್ಲೇಷಿಸಲಾಗಿದೆ. ನಮ್ಮದು ಜಾತ್ಯಾತೀತ ರಾಷ್ಟ್ರವೆಂದು ಘೋಷಿಸಲಾಗಿದೆ.

ಅಧಿಕಾರ ವಿಕೇಂದ್ರೀಕರಣ, ಜಾತ್ಯಾತೀತತೆ, ಸರ್ವ ಸಮಾನತೆ, ಅಲ್ಪ ಸಂಖ್ಯಾತರು ಮತ್ತು ದುರ್ಬಲವರ್ಗದ ಹಿತರಕ್ಷಣೆ, ವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಆಸ್ತಿಯ ಹಕ್ಕು, ಶೋಷಣೆ ವಿರುದ್ಧ ರಕ್ಷಣೆ, ವಿದೇಶಾಂಗ ನೀತಿ, ಒಳಾಡಳಿತ ಶಾಂತಿ ಪಾಲನೆ, ಶಿಕ್ಷಣ ಪ್ರಸಾರ ಮತ್ತು ಆರೋಗ್ಯ ರಕ್ಷಣೆ, ಉದ್ಯೋಗ ಸ್ವಾತಂತ್ರ್ಯ - ಹೀಗೆ ಭಾರತೀಯ ಜನಸಮುದಾಯದ ಘನತೆ ಗೌರವಗಳನ್ನು ರಕ್ಷಿಸಿ, ಅವರ ಜೀವನ ಸುಧಾರಣೆಗೆ ಅಗತ್ಯವಾದ ಅನೇಕ ನಿರ್ದೇಶಿತ ತತ್ವಗಳನ್ನು ನಮ್ಮ ಸಂವಿಧಾನದಲ್ಲಿ ಅಳವಡಿಸಲಾಗಿದೆ.

ನಾವು ನಮ್ಮದೇ ಸಂವಿಧಾನವನ್ನು ಅಂಗೀಕರಿಸಿ ಗಣರಾಜ್ಯವಾಗಿ ೫೦ ವರ್ಷಗಳಾಗಿವೆ. ನಮ್ಮ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸಿದ್ದೇವೆ. ಈಗ ನಮ್ಮ ಗಣರಾಜ್ಯದ

ಸುವರ್ಣಮಹೋತ್ಸವ ಆಚರಿಸಲಿದ್ದೇವೆ. ಆದರೆ ನಮ್ಮ ಗಣರಾಜ್ಯದ ಆಶಯ ಇನ್ನೂ ನಿರೀಕ್ಷಿತ ಮಟ್ಟದಲ್ಲಿ ಈಡೇರಿಲ್ಲವೆಂದೇ ಹೇಳಬೇಕು.

ನಮ್ಮ ಗಣರಾಜ್ಯದ ಸಂವಿಧಾನ ನಾವೆಲ್ಲ ಕೂಡಿ ಬದುಕುವುದಕ್ಕೆ ಸಾಕಷ್ಟು ಅವಕಾಶ ಕಲ್ಪಿಸಿದೆ. ಆದರೆ ಅನೇಕ ಸಂದರ್ಭಗಳಲ್ಲಿ ಸ್ವಾರ್ಥ ಹಿತಾಸಕ್ತಿಗಳು ಸಂವಿಧಾನದ ನೀತಿ-ನಿಯಮಗಳನ್ನೇ ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿ ಮೂಲ ಆಶಯಕ್ಕೆ ಭಂಗ ತಂದಿರುವುದು ನಮ್ಮ ಅನುಭವಕ್ಕೆ ಬಂದಿದೆ. ಜನಹಿತ ದೃಷ್ಟಿಯಿಂದ ಅಗತ್ಯ ತಿದ್ದುಪಡಿ ಮಾಡಲೂ ಸಹ ನಮ್ಮ ಸಂವಿಧಾನದಲ್ಲಿ ಅವಕಾಶವಿದೆ. ಆದರೆ ನಾವೇ ಅಂಗೀಕರಿಸಿರುವ ಸಂವಿಧಾನದ ಆದೇಶಕ್ಕೆ ಅನುಗುಣವಾಗಿ ನಡೆದುಕೊಳ್ಳದಿದ್ದರೆ ಸಂವಿಧಾನದ ಕರ್ತರು ನಿರೀಕ್ಷಿಸಿದ ಭಾರತದ ಪ್ರಗತಿ ಹೇಗಾದೀತು?

ಭಾರತ ಗಣರಾಜ್ಯ ಇಂದು ನಮ್ಮೆಲ್ಲರಿಂದ ಬೇಡುವುದು ಶ್ರಮದ ದುಡಿಮೆಯನ್ನು, ಪ್ರಾಮಾಣಿಕ ವ್ಯವಹಾರವನ್ನು, ಜಾತ್ಯತೀತ ನಡವಳಿಕೆಯನ್ನು. ಸಂವಿಧಾನ ನಮಗೆ ಎಷ್ಟೋ ಹಕ್ಕುಗಳನ್ನು ನೀಡಿದೆ. ಅದರಂತೆ ಕರ್ತವ್ಯವನ್ನೂ ನಿರ್ದೇಶಿಸಿದೆ. ಅಂತಹ ಕರ್ತವ್ಯ ಪಾಲನೆಯಿಂದ ಮಾತ್ರ ನಮ್ಮ ಗಣರಾಜ್ಯ ವಿಶ್ವದಲ್ಲಿ ಗಣ್ಯ ರಾಜ್ಯವಾದೀತು; ನಿಜವಾದ ಅರ್ಥದಲ್ಲಿ ಜನರಾಜ್ಯವಾದೀತು.

ಗಣರಾಜ್ಯ ದಿನಾಚರಣೆಯ ಸಂದರ್ಭದಲ್ಲಿ ಪ್ರತಿಯೊಬ್ಬ ಭಾರತೀಯನೂ ರಾಷ್ಟ್ರ ಸಮಗ್ರತೆ ಮತ್ತು ಸಮೃದ್ಧಿಗಾಗಿ ಅಂತಹ ಕರ್ತವ್ಯದ ದೀಕ್ಷೆ ವಹಿಸಬೇಕು. ❑

ಶ್ರೀವಾಣಿ

## ಜೀವನ ಕಲೆ

ಜೀವನವೆನ್ನುವುದು ಒಂದು ಕಲೆ; ಸಂಗೀತ, ಸಾಹಿತ್ಯಾದಿ ಕಲೆಗಳಿದ್ದಂತೆ. ಕಲೆಯ ಸಿದ್ಧಿಗೆ ಸಾಧನೆ ಮುಖ್ಯ. ಸಂಗೀತವನ್ನು ಸಶಾಸ್ತ್ರೀಯವಾಗಿ ಹಲವಾರು ವರ್ಷಗಳ ಕಾಲ ಆ ಕಲೆಯನ್ನು ರೂಢಿಸಿಕೊಂಡ ಸಂಗೀತಗಾರ ಮಧುರವಾಗಿ ಹಾಡಿದರೆ ಶ್ರೋತೃಗಳಿಗೆ ಕರ್ಣಾನಂದವಾಗುತ್ತದೆ. ಆದರೆ ಅಭ್ಯಾಸವಿಲ್ಲದೆ ಕಲೆಯ ಗಂಧವಿಲ್ಲದವನು ಹಾಡಿದರೆ ಅದು ಗಾರ್ದಭ ಸಂಗೀತವಾಗುತ್ತದೆ. ಅದರಂತೆ ಸಾಹಿತ್ಯಾಭ್ಯಾಸವಿಲ್ಲದವನು ಸಾಹಿತ್ಯ ರಚನೆ ಮಾಡಿದರೆ ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಅದರಂತೆ ಜೀವನ ಕಲೆಯನ್ನು ಅರಿಯದವನು ಸಮಾಜದಲ್ಲಿ ಹಗುರನಾಗಬೇಕಾಗುವುದು. ಆದರೆ ಈ ಜೀವನ ಕಲೆ ಒಂದು ದಿವಸದಲ್ಲಿ, ಒಂದು ತಿಂಗಳಲ್ಲಿ, ಒಂದು ವರ್ಷದಲ್ಲಿ ಬರುವಂಥದಲ್ಲ. ಆ ಕಲೆಯನ್ನು ರೂಢಿಸಿಕೊಳ್ಳಬೇಕಾದರೆ ಬದುಕಿನುದ್ದಕ್ಕೂ ನಿರಂತರ ಸಾಧನೆ ನಡೆಯಬೇಕು. ಯಾವ ಮನುಷ್ಯನಲ್ಲಿಯೂ ನೂರಕ್ಕೆ ನೂರರಷ್ಟು ಒಳ್ಳೆಯ ಗುಣಗಳಿರುವುದಿಲ್ಲ ಅಥವಾ ನೂರಕ್ಕೆ ನೂರರಷ್ಟು ದುಷ್ಟಗುಣಗಳೂ ಇರುವುದಿಲ್ಲ. ಇದು ತತ್ತ್ವಜ್ಞಾನಿಗಳ ಮಾತು. ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ಕೆಟ್ಟಗುಣಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಂಡು ಒಳ್ಳೆಯ ಗುಣಗಳ ಸಂಖ್ಯೆಯನ್ನು ಬೆಳೆಸಿಕೊಂಡಾಗ ಆದರ್ಶ ಪುರುಷನಾಗುತ್ತಾನೆ. ಈ ಸಂಖ್ಯೆ ಹೆಚ್ಚಾದಾಗ ಲೋಕಪೂಜ್ಯನಾಗುತ್ತಾನೆ. ಈ ಒಂದು ಸಾಧನೆ ನಿರಂತರವಾಗಿ ನಡೆಯಬೇಕು. ನಡೆಯುವಾಗ, ನುಡಿಯುವಾಗ, ವ್ಯವಹರಿಸುವಾಗ ತಿದ್ದಿಕೊಳ್ಳಬೇಕು. ಇದು ಚಿಕ್ಕಂದಿನಿಂದಲೂ ನಡೆಯಬೇಕು. ಹೀಗೆ ಕ್ರಮವರಿತ ಸಾಧನೆ ಒಂದು ಶಕ್ತಿಯಾಗಿ ಬೆಳೆಯುತ್ತದೆ. ಇದನ್ನು ಇಚ್ಛಾಶಕ್ತಿ ಎಂದು ಕರೆಯುತ್ತಾರೆ. ಇಂಥ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡಾಗ ಮಾತ್ರ ವ್ಯಕ್ತಿ ಲೋಕವಂದ್ಯನಾಗುತ್ತಾನೆ.





ಸ್ಮರಣಾರ್ಥ ಶತಮಾನೋತ್ಸವ

# ವೀರವೈರಾಗ್ಯಮೂರ್ತಿ, ದಾಸೋಹದ ತವನಿಧಿ ಲಿಂಗೈಕ್ಯ ಶ್ರೀ ಶ್ರೀ ಅಟವೀ ಸ್ವಾಮಿಗಳು

- ಚಂದ್ರಶೇಖರ ನಾರಣಾಪುರ

ಶ್ರೀ ಅಟವೀ ಸ್ವಾಮಿಗಳು ಎಲ್ಲಿಯವರು? ಎಲ್ಲಿಂದ ಬಂದರು? ಇವರ ಕಾಲಮಾನ ಯಾವುದು? ಎಂದು ಎದುರಾಗುವ ಹಲವು ಪ್ರಶ್ನೆಗಳನ್ನು ನಮ್ಮ ಮುಂದೆ ಇಟ್ಟುಕೊಂಡು ಶ್ರೀ ಅಟವೀ ಸ್ವಾಮಿಗಳ ಬಗ್ಗೆ ಜನಪದ ಮತ್ತು ಐತಿಹಾಸಿಕ ಕಥೆಗಳ ಆಧಾರದ ಮೇಲೆ ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಅಟವೀಶ, ಅಟವೀ ಸಿದ್ಧೇಶ್ವರ, ಅಟವೀಶ್ವರ ಎಂಬ ಹೆಸರುಗಳಿಂದ ಶ್ರೀ ಅಟವೀ ಸ್ವಾಮಿಗಳನ್ನು ಕರೆಯಲಾಗುತ್ತಿದೆ.

### ಜನಪದ ಹಿನ್ನೆಲೆ

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಶಿವಶರಣರ ಜತೆಯಲ್ಲಿದ್ದ ಶ್ರೀರೇಚಪ್ಪ ಎಂಬುವವರು ಶ್ರೀ ಚನ್ನಬಸವಣ್ಣನವರ ಜೊತೆಗೂಡಿ ಉಳವಿಗೆ ಬಂದು ನೆಲೆಸಿರುತ್ತಾರೆ. ಅವರು ಚನ್ನಬಸವಣ್ಣನವರ ಅಪ್ಪಣೆಯಂತೆ ಉಳವಿಯಲ್ಲಿಯೇ ಉಳಿದು ದೀರ್ಘ ಸಾಧನೆಯಿಂದ ಯೋಗ ಸಿದ್ಧಿಯನ್ನು ಸಂಪಾದಿಸಿಕೊಂಡಿದ್ದರು. ಶ್ರೀ ರೇಚಪ್ಪ ಸ್ವಾಮಿಗಳು ಧರ್ಮ ಮತ್ತು ಯೋಗದಲ್ಲಿ ಅಗಾಧವಾದದ್ದನ್ನು ಸಾಧಿಸಬೇಕೆಂಬ ಉತ್ಕಟ ಬಯಕೆಯಿಂದ ಉಳವಿಯನ್ನು ತೊರೆದು, ಹಿಮಾಲಯದ ಸಾಧಕರ ಜತೆ ಸೇರಲು ಪ್ರಯಾಣ ಬೆಳೆಸಿದರೆಂಬ ವಿಚಾರ ಜನಪದ ಕಥೆಯಿಂದ ತಿಳಿದುಬರುತ್ತದೆ. ಅವರು ಹಿಮಾಲಯದಲ್ಲಿ ಬಹಳ ವರ್ಷಗಳವರೆಗೆ ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದು ಮತ್ತೆ ತಾಯ್ನಾಡಿಗೆ ಹಿಂದಿರುಗುವಾಗ ಕುರುಕ್ಷೇತ್ರ, ಕಾಶಿ, ಶ್ರೀಶೈಲ, ಕಂಚಿ, ಕಾಳಹಸ್ತಿ, ಕುಂಭಕೋಣ, ಭುವನೇಶ್ವರ, ಪುಣ್ಯ ಕಾವೇರಿ, ಮಧುರೆ, ಕೊಡಗು, ಮುಡುಕುತೊರೆ ಮುಂತಾದ ಅನೇಕ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿದ ಬಗ್ಗೆ ಶ್ರೀಮದ್ ಅಟವೀಶ್ವರ ಚರಿತ್ರೆಯಲ್ಲಿ ಪ್ರಸ್ತಾಪವಾಗಿದೆ.

ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ಬೆಳಗಾಂ ಜಿಲ್ಲೆ ಗೋಕಾಕು ತಾಲ್ಲೂಕಿನ ಅಂಕಲಗಿಗೆ ಬರುತ್ತಾರೆ. ಶ್ರೀ ರೇಚಪ್ಪಸ್ವಾಮಿಗಳು ನಿರ್ಜನ ಪ್ರದೇಶದ ಅಟವಿಯಲ್ಲಿ ತಪೋನುಷ್ಠಾನ ಕೈಗೊಳ್ಳುತ್ತಿದ್ದ ಕಾರಣ ಇವರಿಗೆ ಅಟವೀ ಸ್ವಾಮಿಗಳು ಎಂದು ಭಕ್ತರು ಕರೆಯತೊಡಗಿದರು. ಮುಂದೆ ಈ ಹೆಸರೇ ರೇಚಪ್ಪ ಗುರುಗಳಿಗೆ ಖಾಯಂ ಆಗಿ ಉಳಿದುಕೊಂಡಿತು ಎಂದು ಅಂಕಲಗಿ ಅಟವಿಮಠದ ಪ್ರಕಟಿತ ಕೃತಿ 'ಶ್ರೀ ಅಟವೀಶ್ವರ ಚರಿತ್ರೆ'ಯಲ್ಲಿ ಉಲ್ಲೇಖವಾಗಿದೆ. ಶ್ರೀ ಅಟವೀ ಸ್ವಾಮಿಗಳು ಹಿಮಾಲಯದಿಂದ ಲೋಕ ಸಂಚಾರ ಮಾಡುತ್ತಾ ಅಂಕಲಗಿಗೆ ಆಗಮಿಸಿ ಅಲ್ಲಿ ಮಠವನ್ನು ಸ್ಥಾಪನೆ ಮಾಡಿ, ವೀರಶೈವ ಧರ್ಮದ ಪ್ರಚಾರ ಕೇಂದ್ರವನ್ನಾಗಿ ಮಾಡಿಕೊಂಡು ಯೋಗ ಸಾಧನೆಯಲ್ಲಿ ತೊಡಗಿ ಅನೇಕ ಪವಾಡಗಳನ್ನು ಮಾಡಿ ಭಕ್ತರ ಕಷ್ಟಕಾರ್ಪಣ್ಯಗಳನ್ನು ದೂರ ಮಾಡಿ, ಮಠವನ್ನು ಬೆಳೆಸಿ ಲೋಕ ಸಂಚಾರಕ್ಕೆಂದು ದಕ್ಷಿಣದ ಕಡೆ ಹೊರಡುತ್ತಾರೆ.

ಲೋಕೋದ್ಧಾರದ ಕನಸನ್ನು ಹೊತ್ತ ಶ್ರೀ ಅಟವೀ ಸ್ವಾಮಿಗಳು ಲೋಕಸಂಚಾರದಲ್ಲಿದ್ದಾಗ ಎಲ್ಲಿಯೂ ಹೆಚ್ಚು ಕಾಲ ನಿಲ್ಲದೆ ಮನೋನಿಗ್ರಹಕ್ಕೆ ತಪಸ್ಸು, ದೇಹ ನಿಗ್ರಹಕ್ಕೆ ಹಠಯೋಗವನ್ನು ಮಾಡುತ್ತಾ ಎಲ್ಲೆಲ್ಲಿ ನೆಲೆನಿಂತು ತಪಸ್ಸು ಮಾಡಿದರೋ, ಆ ಸ್ಥಳಗಳಲ್ಲಿ ಜನರನ್ನು ಜಾಗೃತರನ್ನಾಗಿ ಮಾಡಿ ನೆಲೆ ನಿಂತ ಕ್ಷೇತ್ರಗಳನ್ನು ಜಾಗೃತ ಕ್ಷೇತ್ರಗಳನ್ನಾಗಿ ಪರಿವರ್ತಿಸಿ ಮುಂದೆ ಸಾಗಿದರು. ಹಠಯೋಗ ಸಾಧನೆಯಿಂದ ದೇಹ ಮತ್ತು ಮನಸ್ಸನ್ನು ನಿಗ್ರಹಿಸಿ ಮೃತ್ಯುವವನ್ನು ಜಯಿಸಿ ಮೃತ್ಯುಂಜಯರಾಗಿ ಸುಮಾರು ಏಳು ನೂರು ವರ್ಷಗಳ ಕಾಲ ಬದುಕಿದ್ದರು. ಶ್ರೀ ಅಟವೀ ಸ್ವಾಮಿಗಳು ಅಂಕಲಗಿಗೆ ಬರುವ ವೇಳೆಗೆ ಮುಪ್ಪಿನ ಅಂಚಿನಲ್ಲಿದ್ದರು. ಅವರ ಬಳ್ಳಿಯಂತ ದೇಹ ಕೃಶವಾಗಿತ್ತು. ದೇಹ ದಂಡನೆಯಾಗಿದ್ದರೂ ಮುಖದಲ್ಲಿ ತೇಜೋಮಯ ಕಳೆ ಮಿಂಚುತ್ತಿತ್ತು ಎಂಬ ವಿಚಾರ ಜನಪದ ಕಥೆಯಿಂದ ತಿಳಿದುಬರುತ್ತದೆ. ಈ ಜನಪದ ಕಥೆಗಳ ಆಧಾರದ ಮೇಲೆ ಶ್ರೀ ಅಟವೀ ಸ್ವಾಮಿಗಳು ಏಳು ನೂರು ವರ್ಷಗಳ ಕಾಲ ಬದುಕಿ ಗುಬ್ಬಿಗೆ ಆಗಮಿಸಿದರು ಎಂಬ ನಂಬಿಕೆಯಿದೆ.

### ಐತಿಹಾಸಿಕ ಹಿನ್ನೆಲೆ

ಶ್ರೀ ಅಟವೀ ಸ್ವಾಮಿಗಳು ಗುಬ್ಬಿಗೆ ಆಗಮಿಸಿ ಗೋಸಲ ಶ್ರೀ ಚನ್ನಬಸವೇಶ್ವರ ದೇವಸ್ಥಾನದಲ್ಲಿ ಕೆಲವು ದಿನಗಳು ನೆಲೆಸಿ,

ಗುಬ್ಬಿಯ ತೊರೆಯ ದಡದಲ್ಲಿ ತೊರೆ ಮಠವನ್ನು ಸ್ಥಾಪಿಸಿ ಅಲ್ಲಿಯೂ ನಿಲ್ಲದೆ ಸದಾ ಸಂಚಾರ ಮೂರ್ತಿಯಾಗಿ ಗುಬ್ಬಿಯಿಂದ ಸಿದ್ಧಗಂಗಾ ಕ್ಷೇತ್ರಕ್ಕೆ (೧೮೬೫) ಬಂದರು. ಆ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗ ಸ್ವಾಮಿಗಳು ಇಲ್ಲಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಇವರು ಅನುಷ್ಠಾನ ಮೂರ್ತಿಗಳಾಗಿ ಸದಾ ಧ್ಯಾನಮಗ್ನರಾಗಿದ್ದರಿಂದ ಮಠದ ಅಭಿವೃದ್ಧಿಯ ಕಡೆಗೆ ಹೆಚ್ಚು ಗಮನಕೊಡದ ಕಾರಣ ಸಿದ್ಧಗಂಗಾ ಮಠವು ಜೀರ್ಣಾವಸ್ಥೆಗೆ ಬಂದಿತ್ತು. ಶ್ರೀ ಅಟವೀ ಸ್ವಾಮಿಗಳು ಸಿದ್ಧಗಂಗಾ ಮಠಕ್ಕೆ ಬಂದವರೇ ದಾಸೋಹಕ್ಕೆ ಹೆಚ್ಚು ಒತ್ತುಕೊಟ್ಟು ದುಡಿಯತೊಡಗಿದರು. ಮುಪ್ಪಿನಲ್ಲಿದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಶ್ರೀ ಅಟವೀ ಸ್ವಾಮಿಗಳ ಕ್ರಿಯಾಶೀಲಗುಣಗಳನ್ನು ಗಮನಿಸಿ, ಮಠದ ಪೂರ್ಣ ಅಧಿಕಾರವನ್ನು ಶ್ರೀ ಅಟವೀ ಸ್ವಾಮಿಗಳಿಗೆ ಒಪ್ಪಿಸಿದರು.

ಶ್ರೀ ಅಟವೀ ಸ್ವಾಮಿಗಳು ಮಠದ ಸಮಸ್ತ ಆಡಳಿತವನ್ನು ನೋಡಿಕೊಳ್ಳುತ್ತಾ ಗವಿಯೊಂದರಲ್ಲಿ ದೀರ್ಘಕಾಲ ತಪಸ್ಸನ್ನು ಕೈಗೊಂಡರು. ಈ ತಪೋಭೂಮಿಯಲ್ಲಿ ಧರ್ಮ ಮತ್ತು ದಾಸೋಹ ಬೆಳೆಯಲು ಪ್ರೇರಕ ಶಕ್ತಿಯಾದರು. 'ಇಂದು ಹಾಕಿದ ಬೆಂಕಿಮುಂದೆ ಎಂದೂ ಆರದಿರಲಿ, ಇಂದು ಪ್ರಾರಂಭಗೊಂಡ ಅನ್ನದಾಸೋಹ ಎಂದಿಗೂ ನಿಲ್ಲದಿರಲಿ' ಎಂದು ಹಾರೈಸಿ ಅನ್ನ ದಾಸೋಹವನ್ನು ಪ್ರಾರಂಭ ಮಾಡಿದರು. ಅಂದು ಪ್ರಾರಂಭಗೊಂಡ ಅನ್ನ ದಾಸೋಹ ಅಂದಿನಿಂದ ಹತ್ತು ಪಟ್ಟು, ನೂರು ಪಟ್ಟು ಬೆಳೆದು ಈಗ ಸಾವಿರ ಪಟ್ಟು ಬೆಳೆದು ಮಹಾ ದಾಸೋಹ ಕ್ಷೇತ್ರವಾಗಿ ವಿಶ್ವಮಾನ್ಯತೆಯನ್ನು ಪಡೆದುಕೊಂಡಿದೆ. ಇಂತಹ ಒಂದು ಸಾಧನೆಯ ಹರಿಕಾರರಾದ ಶ್ರೀ ಅಟವೀ ಸ್ವಾಮಿಗಳು ಸಿದ್ಧಗಂಗಾ ಕ್ಷೇತ್ರಕ್ಕೆ ಶ್ರೀ ಉದ್ದಾನ ಶಿವಯೋಗಿಗಳನ್ನು ನೆಲೆಗೊಳಿಸಿ ಭಕ್ತರ ಅಪೇಕ್ಷೆಯ ಮೇರೆಗೆ ಪುನಃ ಗುಬ್ಬಿಗೆ ತೆರಳಿದರು.

ಗುಬ್ಬಿಯ ತೊರೆಮಠಕ್ಕೆ ಆಗಮಿಸಿದ ಶ್ರೀ ಅಟವೀ ಸ್ವಾಮಿಗಳು ಶ್ರೀ ಗೋಸಲ ಚನ್ನಬಸವೇಶ್ವರರ ಜಾತ್ರೆಯನ್ನು ಬಹಳ ವೈಭವಯುತವಾಗಿ ನಡೆಯುವಂತೆ ನೋಡಿಕೊಂಡರು. ಜನರು ಈ ಜಾತ್ರೆಗೆ 'ನಭೂತೋ ನಭವಿಷ್ಯತಿ' ಎಂಬಂತೆ ಸೇರತೊಡಗಿ ದಾಖಲೆಯನ್ನೇ ನಿರ್ಮಿಸಿದರು. ಜಾತ್ರೆ ನಡೆದ ಕೆಲವೇ ದಿನಗಳ ನಂತರ ಶ್ರೀ ಚನ್ನಬಸವೇಶ್ವರರಿಗೆ ಬೆಳ್ಳಿ ಪಲ್ಲಕ್ಕಿಯನ್ನು ಮಾಡಿಸಿಕೊಡಬೇಕೆಂಬ ಹಂಬಲ ತೊಟ್ಟು ಗುಬ್ಬಿಯ ಭಕ್ತರಲ್ಲಿ ಈ ವಿಚಾರವನ್ನು ತಿಳಿಸಿದಾಗ ಗುಬ್ಬಿಯ ಭಕ್ತರು ತಮ್ಮ ಶಕ್ತಿಯನ್ನು ಮೀರಿ ಬೆಳ್ಳಿಯನ್ನು ನೀಡುವುದಾಗಿ ಭರವಸೆ ಕೊಡುತ್ತಾರೆ. ಬೆಳ್ಳಿ ಕೊಡುವುದಾಗಿ ವಾಗ್ದಾನ ನೀಡಿ ನಂತರ ಕೊಡದೇ ಹೋದಾಗ ಬೇಸರಗೊಂಡ ಶ್ರೀ ಅಟವೀ ಸ್ವಾಮಿಗಳು ಬೆಳ್ಳಿ ಪಲ್ಲಕ್ಕಿಯನ್ನು ಸ್ವತಃ ತಾವೇ ಮಾಡಿಸಲು ನಿರ್ಧರಿಸಿ, ಗುಬ್ಬಿಯ ಕೆಲವೇ ಭಕ್ತರು ದಾನವಾಗಿ ತಂದುಕೊಟ್ಟ ಬೆಳ್ಳಿಯ ಜತೆಗೆ ತಮ್ಮ ಪಾಲಿನ ಬೆಳ್ಳಿಯನ್ನು ಹಾಕಿ ಪಲ್ಲಕ್ಕಿಯನ್ನು ಮಾಡಿಸಿ ಅರ್ಪಿಸುತ್ತಾರೆ. ಅಂದು ಮಾಡಿಸಿಕೊಟ್ಟ ಬೆಳ್ಳಿ ಪಲ್ಲಕ್ಕಿಯು ಇಂದಿಗೂ ಶ್ರೀ ಚನ್ನಬಸವೇಶ್ವರರ ದೇವಾಲಯದಲ್ಲಿ ಕಾಣಬಹುದಾಗಿದೆ.

ಶ್ರೀ ಅಟವೀ ಸ್ವಾಮಿಗಳು ಗುಬ್ಬಿಯನ್ನು ತಮ್ಮ ಧರ್ಮ ಪ್ರಚಾರದ ಕೇಂದ್ರ ಬಿಂದುವನ್ನಾಗಿಸಿಕೊಂಡು ಕುಣಿಗಲ್ಲು, ಚಿಕ್ಕತೊಟ್ಟಿಲುಕೆರೆ ಮುಂತಾದ ಕಡೆಗಳಲ್ಲಿ ಕೆಲವು ದಿನ ನೆಲೆನಿಂತು ತಪೋನುಷ್ಠಾನವನ್ನು ಕೈಗೊಳ್ಳುತ್ತಿದ್ದರು. ಇದರಲ್ಲಿ ಚಿಕ್ಕತೊಟ್ಟಿಲುಕೆರೆ ಶ್ರೀ ಅಟವೀ ಸ್ವಾಮಿಗಳ ತಪೋಕ್ಷೇತ್ರಗಳಲ್ಲಿ ಒಂದಾಗಿದ್ದು ಈ ಕ್ಷೇತ್ರಕ್ಕೆ ಆಗಿಂದಾಗ್ಗೆ ಭೇಟಿಕೊಟ್ಟು, ತಪೋನುಷ್ಠಾನ ಕೈಗೊಂಡು ಬರುತ್ತಿದ್ದರು.

## ಶ್ರೀ ಅಟವೀ ಸ್ವಾಮಿಗಳ ತಪೋಕ್ಷೇತ್ರ

ತುಮಕೂರು ತಾಲ್ಲೂಕಿನ ಚಿಕ್ಕತೊಟ್ಟಲುಕೆರೆಯು ತಾಲ್ಲೂಕು ಕೇಂದ್ರದ ಉತ್ತರಕ್ಕೆ ಹದಿನೆಂಟು ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಈಶಾನ್ಯ ಭಾಗಕ್ಕೆ ಒಂದೂವರೆ ಕಿ.ಮೀ. ದೂರದಲ್ಲಿ ಶ್ರೀ ಅಟವೀ ಸ್ವಾಮಿಗಳು ತಪೋನುಷ್ಠಾನ ಕೈಗೊಳ್ಳುತ್ತಿದ್ದ ಗವಿಕ್ಷೇತ್ರ ವಿದೆ. ಶ್ರೀ ಅಟವೀ ಸ್ವಾಮಿಗಳು ಈ ಕ್ಷೇತ್ರಕ್ಕೆ ಬರುವ ಮುನ್ನ ಶ್ರೀ ಓಂಕಾರ ಸ್ವಾಮಿಗಳು ತಪಸ್ಸನ್ನಾಚರಿಸುತ್ತಿದ್ದ ಈ ಸ್ಥಳದಲ್ಲಿ ಮಠವನ್ನು ಸ್ಥಾಪನೆ ಮಾಡಿದ್ದರು. ಶ್ರೀ ಓಂಕಾರೇಶ್ವರರ ನಂತರ ಶ್ರೀ ಜಡೆ ಸ್ವಾಮಿಗಳು ಅಧಿಕಾರಕ್ಕೆ ಬಂದು ಈ ಧಾರ್ಮಿಕ ಕಾರ್ಯಗಳು ನಿಲ್ಲದಂತೆ ನೋಡಿಕೊಂಡು, ಜನರನ್ನು ಜಾಗೃತರನ್ನಾಗಿ ಮಾಡಿ ಈ ಕ್ಷೇತ್ರದಲ್ಲಿಯೇ ಲಿಂಗೈಕ್ಯರಾದರು. ಇಂತಹ ತಪೋ ಭೂಮಿಯಲ್ಲಿ ಶ್ರೀ ಅಟವೀ ಸ್ವಾಮಿಗಳು ನೈಸರ್ಗಿಕವಾಗಿ ರಚನೆಗೊಂಡಿದ್ದ ಗವಿಯಲ್ಲಿ ತಪೋನುಷ್ಠಾನ ಕೈಗೊಂಡು ಈ ಕ್ಷೇತ್ರವನ್ನು ಬೆಳೆಸಿದರು. ಅಲ್ಲದೆ ತಮ್ಮ ಕರಕಮಲಸಂಜಾತರಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗಳಿಗೆ ಅನುಗ್ರಹವನ್ನು ನೀಡಿ ಮಠವನ್ನು ಪುನರ್ ಸ್ಥಾಪಿಸಿದರು.

ಶ್ರೀ ಅಟವೀ ಸ್ವಾಮಿಗಳು ಈ ಕ್ಷೇತ್ರದಲ್ಲಿ ನೆಲೆನಿಂತ ಸಂದರ್ಭದಲ್ಲಿ ಒಮ್ಮೆ ಇಲ್ಲಿಗೆ ಸಮೀಪದ ಕೆಸ್ತೂರಿಗೆ ಆಗಮಿಸಿ ಇಲ್ಲಿನ ಶ್ರೀ ವೀರಭದ್ರಸ್ವಾಮಿ ದೇವಸ್ಥಾನದಲ್ಲಿ ತಪೋನುಷ್ಠಾನ ಕೈಗೊಂಡ ಸಂದರ್ಭದಲ್ಲಿ ಇಲ್ಲಿನ ಮಕ್ಕಳಿಗೆ ಜ್ವರದ ಬಾಧೆ ಕಾಣಿಸಿಕೊಂಡು ಇಲ್ಲಿನ ಮುರಿಗಪ್ಪ ಎಂಬುವವರು ಮಕ್ಕಳನ್ನೆಲ್ಲಾ ಒಂದೆಡೆಗೆ ಸೇರಿಸಿ ತಮಗೆ ತಿಳಿದಿದ್ದ ಹಳ್ಳಿ ವೈದ್ಯ ಪದ್ಧತಿಯಲ್ಲಿ ಮಕ್ಕಳಿಗೆ ಉಪಚಾರವನ್ನು ನೀಡಿದರೂ ಗುಣಮುಖವಾಗದೇ ಬಳಲುತ್ತಿದ್ದವು. ಇದರಿಂದ ಆತಂಕಗೊಂಡ ಮುರಿಗಪ್ಪನವರು ಶ್ರೀ ಅಟವೀ ಸ್ವಾಮಿಗಳನ್ನು ಭಕ್ತಿಯಿಂದ ಪ್ರಾರ್ಥಿಸುತ್ತಾರೆ. ಆಗ ಶ್ರೀ ಅಟವೀ ಸ್ವಾಮಿಗಳು ವಿಚಾರವನ್ನು ತಿಳಿದು ಜ್ವರದಿಂದ ಬಳಲುತ್ತಿದ್ದ ಮಕ್ಕಳಿಗೆ ತಮ್ಮ ತಪೋಶಕ್ತಿಯಿಂದ ಔಷಧೋಪಚಾರವನ್ನು ಮಾಡಿ





ಗುಣಮುಖರಾಗುವಂತೆ ಮಾಡಿದರು. ಈ ರೀತಿ ನಾನಾ ಭಾಗಗಳಲ್ಲಿ ಅನೇಕ ಪವಾಡಗಳನ್ನು ಮಾಡಿ, ಜನರ ಕಷ್ಟಕಾರ್ಪಣ್ಯಗಳನ್ನು ನಿವಾರಿಸಿ ಪ್ರಸಿದ್ಧಿಯನ್ನು ಪಡೆದರು.

## ಗುಬ್ಬಿಯಲ್ಲಿ ಕೈಗೊಂಡ ಕಾರ್ಯಗಳು

ಶ್ರೀ ಅಟವೀ ಸ್ವಾಮಿಗಳು ಗುಬ್ಬಿಗೆ ಬಂದು ನೆಲೆನಿಂತು ಶ್ರೀ ಚನ್ನಬಸವೇಶ್ವರ ದೇವಸ್ಥಾನದ ಅಭಿವೃದ್ಧಿಗೆ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದರು. ದೇವಸ್ಥಾನದ ಬಳಿ ಸರ್ವರೋಗಗಳ ಪರಿಹಾರಕ್ಕಾಗಿ ಪಾಪನಾಶಿನಿಕೊಳವನ್ನು ನಿರ್ಮಿಸಬೇಕೆಂಬ ಸಂಕಲ್ಪ ತೊಟ್ಟರು. ತಮ್ಮ ಸಂಕಲ್ಪವನ್ನು ಅನುಷ್ಠಾನಗೊಳಿಸುವ ದೃಷ್ಟಿಯಿಂದ ಗುಬ್ಬಿ ಗ್ರಾಮದ ಮುಖಂಡರನ್ನು ಕರೆಸಿ ವಿಚಾರವನ್ನು ತಿಳಿಸಿ, ನೆರವಾಗುವಂತೆ ಅಪ್ಪಣೆ ಕೊಡಿಸಿದರು.

ಶ್ರೀ ಚನ್ನಬಸವಣ್ಣನವರ ದೇವಸ್ಥಾನದ ಮುಂಭಾಗದ ಎಡಭಾಗದಲ್ಲಿರುವ ವಿಶಾಲ ಮೈದಾನದಲ್ಲಿ ಪಾಪನಾಶಿನಿ ಕೊಳವನ್ನು ಸ್ಥಾಪನೆ ಮಾಡಲು ಪ್ರಾರಂಭಿಸಿದಾಗ ಪ್ರತಿ ಮನೆಗೊಬ್ಬರಂತೆ ಭಕ್ತರು ಬಂದು ಶ್ರೀ ಅಟವೀ ಸ್ವಾಮಿಗಳು ಕೈಗೊಂಡ ಕಾರ್ಯದಲ್ಲಿ ಭಾಗಿಗಳಾದರು. ಗುರುಗಳ ನಿರೀಕ್ಷೆಗಿಂತ ಮೊದಲೇ ಕೊಳದ ಕೆಲಸ ಮುಕ್ತಾಯವಾಯಿತು. ಈ ಪಾಪನಾಶಿನಿ ಕೊಳದಲ್ಲಿ ಅರವತ್ತ ಮೂರು ಲಿಂಗಗಳ ಪ್ರತಿಷ್ಠಾಪನಾ ಕಾರ್ಯವನ್ನು ಮಾಡಬೇಕೆಂದಿದ್ದರೂ ಅನಿವಾರ್ಯ ಕಾರಣಗಳಿಂದ ಮಾಡಲಾಗಲಿಲ್ಲ. ನಂತರ ಬಂದ ಶ್ರೀ ನೀಲಕಂಠ ಸ್ವಾಮಿಗಳು ಈ ಕಾರ್ಯವನ್ನು ಮಾಡಿ ಮುಗಿಸಿದರು.

## ಜೀವಂತ ಸಮಾಧಿಗೆ ಸಿದ್ಧತೆ

ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಧರ್ಮ ಮತ್ತು ದಾಸೋಹದ ಕ್ಷೇತ್ರವನ್ನಾಗಿ ರೂಪಿಸಿದ ಶ್ರೀ ಅಟವೀ ಸ್ವಾಮಿಗಳು ಗುಬ್ಬಿಯ ತೊರೆಮಠದಲ್ಲಿ ದಾಸೋಹವು ಶಾಶ್ವತವಾಗಿ ನಡೆಯಬೇಕೆಂಬ ಹಂಬಲದಿಂದ ನಿತ್ಯ ದಾಸೋಹಕ್ಕೆ ಚಾಲನೆಯನ್ನು ಕೊಟ್ಟರು. ತಮ್ಮ ಕೊನೆಯ ದಿನಗಳ ಕಾರ್ಯಕ್ಷೇತ್ರವಾಗಿ ರೂಪುಗೊಂಡ ಗುಬ್ಬಿ ಕ್ಷೇತ್ರದಲ್ಲಿ ಜೀವಂತ ಸಮಾಧಿಯಾಗಬೇಕೆಂಬ ಹಂಬಲದಿಂದ ತೊರೆಮಠದ ಮುಂಭಾಗದ ಆವರಣದಲ್ಲಿ ತಮಗಾಗಿ ಸಮಾಧಿಯನ್ನು ನಿರ್ಮಿಸಿಕೊಂಡರು. ತಮ್ಮ ಕರಕಮಲಸಂಜಾತರಾಗಿದ್ದ ಶ್ರೀ ಚಿಕ್ಕಅಟವಿಸ್ವಾಮಿಗಳು (ಶ್ರೀ ಸಿದ್ಧವೀರಸ್ವಾಮಿಗಳು) ಮತ್ತು ಉದ್ದಾನ ಸ್ವಾಮಿಗಳನ್ನು ಕರೆಸಿ ತಾವು ಜೀವಂತ ಸಮಾಧಿಯಾದ ಮೇಲೆ ಮಾಡಬೇಕಾದ ವಿಧಿವಿಧಾನಗಳ ಬಗ್ಗೆ ತಿಳಿಸಿದರು. ಜೀವಂತ ಸಮಾಧಿಯನ್ನು ನಿರ್ಮಿಸಿಕೊಂಡ ಶ್ರೀ ಅಟವೀ ಸ್ವಾಮಿಗಳು ಯಾರೊಂದಿಗೂ ಹೆಚ್ಚು ಬೇರೆಯದೆ ದೀರ್ಘ ತಪೋನುಷ್ಠಾನಕ್ಕೆ ಕುಳಿತರು. ಇಂತಹ ದಿನಗಳಲ್ಲಿ ಶ್ರೀ ಅಟವೀ ಸ್ವಾಮಿಗಳನ್ನು ತಮ್ಮ ಮನೆಗೆ ಆಮಂತ್ರಿಸಲೆಂದು ಚಿಕ್ಕತೊಟ್ಟಲುಕೆರೆ ಪ್ರಾಂತ್ಯದ ಭಕ್ತನೊಬ್ಬ ಆಗಮಿಸಿ ಪ್ರಾರ್ಥಿಸಿಕೊಂಡಾಗ ಭಕ್ತನ ಕೋರಿಕೆಯನ್ನು ಮನ್ನಿಸಿದ ಶ್ರೀಶ್ರೀಗಳು ಕಾರ್ತೀಕ ಮಾಸದೊಳಗೆ ನಾವು ಈ ಮಠದಲ್ಲಿಯೇ ಇರಬೇಕು. ಅಷ್ಟರೊಳಗಾಗಿ ನಮ್ಮನ್ನು ಮಠಕ್ಕೆ ಕರೆದುಕೊಂಡು ಬಂದು ಬಿಡಬೇಕು ಎಂದು ಅಪ್ಪಣೆಯನ್ನು ಕೊಟ್ಟು ಭಕ್ತನ ಮನೆಗೆ ಪೂಜೆಗೆಂದು ಹೊರಡುತ್ತಾರೆ.

## ಬದಲಾದ ವಿಧಿಯ ಲೀಲೆ

ಭಕ್ತನ ಮನೆಯಲ್ಲಿ ಪೂಜೆಯನ್ನು ಮುಗಿಸಿಕೊಂಡು ಗುಬ್ಬಿಗೆ ಹಿಂದಿರುಗಲು ಗಾಡಿಯಲ್ಲಿ ಹಿಂದಿರುಗುವಾಗ ಪ್ರಯಾಣ ಮಧ್ಯದಲ್ಲಿ ಗಾಡಿ ಹೊಡೆಯುತ್ತಿದ್ದ ಸೇವಕನನ್ನು ಕುರಿತು 'ಗುರುಕಾರುಣ್ಯ ಕರೆಯುತ್ತಿದೆ. ನಾನು ಬೇಗ ಗುಬ್ಬಿಯನ್ನು ತಲುಪಬೇಕಾಗಿದೆ. ಎತ್ತುಗಳನ್ನು ಚುರುಕುಗೊಳಿಸು. ನಾವು ಗಾಡಿಯಲ್ಲಿಯೇ ಧ್ಯಾನಾಸಕ್ತರಾಗಿ ಕುಳಿತಿರುತ್ತೇವೆ. ಗುಬ್ಬಿ ಬಂದ ಮೇಲೆ ಎಚ್ಚರಿಸು, ದಾರಿಯ ಮಧ್ಯದಲ್ಲಿ ಎಲ್ಲಿಯಾದರೂ ಎಚ್ಚರಿಸೀಯ ಜೋಕೆ' ಎಂದು ಗುರುಗಳು ಎಚ್ಚರಿಕೆ ಕೊಟ್ಟು ಗಾಡಿಯಲ್ಲಿ ತಪೋಮಗ್ನರಾದರು. ಗಾಡಿ ಹೊಡೆಯುತ್ತಿದ್ದ ಸೇವಕ ಚಿಕ್ಕತೊಟ್ಟಲು ಕೆರೆಯವನಾಗಿದ್ದು ತನ್ನ ಊರಿನಲ್ಲಿಯೇ ಗುರುಗಳ ಜೀವಂತ ಸಮಾಧಿಯಾದರೆ ನಾನು ಹುಟ್ಟಿದ ಊರಿಗೆ ಕೀರ್ತಿ ಬರುತ್ತದೆ ಎಂದು ಯೋಚಿಸಿ ಚಿಕ್ಕತೊಟ್ಟಲುಕೆರೆಯ ದಾರಿಯಲ್ಲಿ ಬರುತ್ತಿದ್ದಾಗ ಗಾಡಿಯನ್ನು ಮಠದ ಬಳಿ ನಿಲ್ಲಿಸಿ 'ಗುರುವೇ, ನಾವು ಮಠಕ್ಕೆ ಬಂದು ಸೇರಿದ್ದೇವೆ ಕಣ್ಣುಬಿಡಿ' ಎಂದು ಎಚ್ಚರಿಸುತ್ತಾನೆ. ಶ್ರೀ ಅಟವೀ ಸ್ವಾಮಿಗಳು ಕಣ್ಣುಬಿಟ್ಟು ನೋಡುತ್ತಾರೆ. ಗುಬ್ಬಿಯ ತೊರೆಮಠದ ಬದಲಿಗೆ ಚಿಕ್ಕತೊಟ್ಟಲುಕೆರೆಯ ಮಠ ಕಣ್ಣು ಎದುರಿಗೆ ಇದೆ. 'ಇದೇನು ಗುಬ್ಬಿಯ ತೊರೆಮಠದಲ್ಲಿ ಎಚ್ಚರಿಸುವುದರ ಬದಲು ಇಲ್ಲಿ ಎಚ್ಚರಿಸಿರುವೆ, ನಮ್ಮ ಕಾರ್ಯಕ್ಷೇತ್ರವಾದ ಗುಬ್ಬಿಯಲ್ಲಿ ತಾವು ಜೀವಂತ ಸಮಾಧಿಯಾಗಬೇಕು ಎಂಬ ಹಂಬಲ ಹೊಂದಿದ್ದ ನಮ್ಮ ಆಸೆಗೆ ಭಂಗವುಂಟು ಮಾಡಿದೆಯಲ್ಲೋ ಪಾಪಿ ಎಂದು ನಿಂದಿಸಿ, ಗುರುದ್ರೋಹವನ್ನು ಮಾಡಿದ ನಿನ್ನ ವಂಶ ನಾಶವಾಗಲಿ' ಎಂದು ಶಾಪ ಕೊಟ್ಟು ಗಾಡಿಯಿಂದ ಇಳಿದ ಶ್ರೀ ಅಟವೀ ಸ್ವಾಮಿಗಳು ನೇರವಾಗಿ ತಾವು ತಪೋನುಷ್ಠಾನವನ್ನು ಕೈಗೊಳ್ಳುತ್ತಿದ್ದ ಗವಿಯಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡು ನಿರ್ವಿಕಲ್ಪ ಸಮಾಧಿಯನ್ನು ಹೊಂದುತ್ತಾರೆ.

ನಾಡಿನ ಬೆಳಕಾಗಿದ್ದ ಶ್ರೀ ಅಟವಿಸ್ವಾಮಿಗಳು ೧೯೦೧ರಲ್ಲಿ (ಕಾರ್ತೀಕಮಾಸ ಶುಕ್ಲಪಕ್ಷದ ದಶಮಿ) ನಿರ್ವಿಕಲ್ಪ ಸಮಾಧಿಯಾಗಿದ್ದರಿಂದ ಚಿಕ್ಕತೊಟ್ಟಲುಕೆರೆಯು ಧಾರ್ಮಿಕ ಕ್ಷೇತ್ರದಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿತು.

(ಕೃಪೆ : ಮಹಾದಾಸೋಹಿ)

# ಲಿಂಗೈಕ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳು

- ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ

ನಮ್ಮ ಕೃತಿಯ ನಾಯಕರಾದ ಶ್ರೀ ಶಿವಯೋಗಿಗಳು-ಶಿವಗಂಗಾ ಕ್ಷೇತ್ರಕ್ಕೆ ಸಮೀಪದಲ್ಲಿರುವ ಲಕ್ಕೂರು ಗ್ರಾಮದ ಒಂದು ವೀರಶೈವ ಬಡಕುಟುಂಬದಲ್ಲಿ ಇಂದಿಗೆ ಸುಮಾರು ೮೦-೮೫ ವರ್ಷಗಳ ಪೂರ್ವದಲ್ಲಿ ಅವತರಿಸಿದರು. ಇವರ ಬಾಲ್ಯ ಲೀಲೆಗಳು ಅವರ ಭವಿಷ್ಯದ ಸೂಚನೆಗಳು. ''ಬೆಳೆಯು ಮೊಳೆಯಲ್ಲಿ ಕಾಣುವುದು'' ಎಂಬ ಉಕ್ತಿಗೆ ಅನುಸಾರವಾಗಿ ಶ್ರೀ ಶಿವಯೋಗಿಗಳು ತಮ್ಮ೭-೮ ವರ್ಷದಲ್ಲಿ ವಯಸ್ಸಿನವರಾಗಿರುವಲ್ಲಿ ತಮ್ಮಗ್ರಾಮದ ಸಮೀಪದಲ್ಲಿರುವ ನಿಜಗಲ್ಲುದುರ್ಗದಲ್ಲಿ ಮೇಕೆಗಳನ್ನು ಕಾಯಲು ಹೋಗುತ್ತಿದ್ದುದೂ, ಮೇಕೆಗಳನ್ನು ವಿಹರಿಸಲಿಕ್ಕೆ ಬಿಟ್ಟು ಒಡನಾಡಿಗಳೊಂದಿಗೆ ಆಟವಾಡುವುದನ್ನೂ ತೊರೆದು ಒಂದು ಗುಹೆಯಲ್ಲಿ ಧ್ಯಾನಮಗ್ನರಾಗುತ್ತಿದ್ದದೂ, ಇವರ ಮೇಕೆಗಳು ಮಾತ್ರ ಸುರಕ್ಷಿತವಾಗಿ ಸಾಯಂಕಾಲಕ್ಕೆ ದೊಡ್ಡಿಯನ್ನು ಸೇರುತ್ತಿದ್ದುದೂ ಇಂದಿಗೂ ಅನೇಕರ ನೆನಪಿನಲ್ಲುಳಿದಿದೆ. ಒಮ್ಮೊಮ್ಮೆ ಎರಡು ಮೂರು ದಿವಸಗಳು ಕಾಡಿನಲ್ಲಿಯೇ ಮೈಮರೆತಿರುವಲ್ಲಿ ಮನೆಯವರು ಬಹಳ ಪ್ರಯತ್ನದಿಂದ ಮನೆಗೆ ಕರೆತರುತ್ತಿದ್ದರಂತೆ.

## ಗುರುಕುಲ ವಾಸ

ಹೀಗೆ ಆಧ್ಯಾತ್ಮ ತೇಜಸ್ಸಿನಿಂದ ಮುಗ್ಧರಾದ ಇವರು ಸದ್ಗುರುವನ್ನು ಅರಸುತ್ತ ಸಿದ್ಧಗಂಗಾ ಕ್ಷೇತ್ರದಲ್ಲಿ ತಪೋನಿಷ್ಠರಾಗಿದ್ದ ಶ್ರೀ ಅಟವೀಸ್ವಾಮಿಗಳವರನ್ನು ಸಂದರ್ಶಿಸಿ ಅವರ ಆತ್ಮತೇಜಸ್ಸಿನಿಂದ ಆಕರ್ಷಿತರಾಗಿ ಸೇವೆಯಲ್ಲಿ ನಿರತರಾದರು. ಶ್ರೀ ಅಟವೀಸ್ವಾಮಿಗಳ ಪ್ರಭಾವಮೂಢರಾದ ಅನೇಕ ವಿದ್ಯಾರ್ಥಿಗಳು ಅವರ ಸೇವೆಯಲ್ಲಿ ಭಾಗಿಗಳಾಗಿದ್ದರು.

## ಮಿತ್ರಮಂಡಲಿ

ಈ ಶಿಷ್ಯವೃಂದದಲ್ಲಿ ನುರಿತ ಅನೇಕ ವ್ಯಕ್ತಿಗಳು ಇಂದಿಗೂ ವೀರಶೈವ ಪ್ರಮುಖ ಮಠಾಧಿಪತಿಗಳಾಗಿರುತ್ತಾರೆ. ಅವರಲ್ಲಿ ಶಿವಗಂಗೆಯ ಮೇಲಣಗವಿ ವೀರಸಿಂಹಾಸನಾಧೀಶರಾದ ಶ್ರೀ॥ ಜ॥ ಚನ್ನವೀರಶಿವಾಚಾರ್ಯರೂ, ಮತುಕೂರು ಶ್ರೀ ನಂಜುಂಡ ಶಿವಯೋಗಿಗಳೂ, ತೊಟ್ಟಿಲುಕೆರೆ ಮತ್ತು ಗುಬ್ಬಿ ಅಟವೀಸ್ವಾಮಿಗಳ ಮಠಗಳ ಶ್ರೀಗಳವರೂ ಮತ್ತು ಶ್ರೀ ನಿಡುಮಾಮಿಡಿ ಮಠಕ್ಕೆ ಸೇರಿದ ಗುಂಡ್ಲಹಳ್ಳಿ ಮಠದ ನಾಗಾರ್ಯರ ಪುತ್ರರಾದ ಶ್ರೀ ನಂಜುಂಡಸ್ವಾಮಿಗಳೇ ಮುಂತಾಗಿ ಅನೇಕರಿದ್ದರೆಂದು ತಿಳಿದುಬರುತ್ತದೆ. ಇವರಲ್ಲಿ ನಮ್ಮ ಕೃತಿಯ ನಾಯಕರಾದ ಶ್ರೀ ಉದ್ದಾನ ಶಿವಯೋಗಿಗಳೂ ಮತ್ತು ಶ್ರೀ ನಂಜುಂಡುಸ್ವಾಮಿಗಳೂ ಸಹ ತಮ್ಮ ವಿದ್ಯಾವಿವೇಕ ತೇಜೋವಿಶೇಷಗಳಲ್ಲಿ ಅಟವೀಂದ್ರರ ಪೂರ್ಣ ಅನುಗ್ರಹಕ್ಕೆ ಪಾತ್ರರಾಗಿದ್ದರೆಂದು ತಿಳಿದುಬಂದಿದೆ. ವಿಧಿವಶದಿಂದ ಶ್ರೀ ನಂಜುಂಡಸ್ವಾಮಿಗಳು ಗುಬ್ಬಿಯ ಹೊಂಡದಲ್ಲಿ ಶಿವಾಧೀನರಾದ ತರುವಾಯ ಶಿವಯೋಗಿಗಳ ಪ್ರೇಮವಲ್ಲರಿಯು ನಮ್ಮ ಕೃತಿಯ ನಾಯಕರಲ್ಲಿ ಇಮ್ಮಡಿಸಿ ಪ್ರತಿಫಲಿಸಿತು.

ಅಟವೀಂದ್ರರು ಇವರಲ್ಲಿದ್ದ ಭವಿಷ್ಯ ಭವಿತವ್ಯದ ತೇಜಸ್ಸನ್ನು ತಮ್ಮ ಯೋಗದೃಷ್ಟಿಯಿಂದ ಮನಗಂಡಿದ್ದರು. ಇವರಲ್ಲಿನ ಮಹಾಪುರುಷ ಲಕ್ಷಣಗಳನ್ನೂ ಅರಿತಿದ್ದರು. ಸಮಯ ವಿಶೇಷಗಳಲ್ಲಿ ಅನೇಕ ದಿವ್ಯಮಂತ್ರ ರಹಸ್ಯಗಳನ್ನು ಉಪದೇಶಿಸುತ್ತಿದ್ದರು. ಎಲ್ಲ ವಿಷಯಗಳಲ್ಲಿಯೂ ಗುರುಗಳ ಹೃದಯವನ್ನು ಅನುಸರಿಸುತ್ತಿದ್ದ ಇವರ ಏಳ್ಗೆಯೇ ಅವರ ಜೀವನದ ಧ್ಯೇಯವಾಗಿತ್ತು. ವಿದ್ಯಾರ್ಥಿದೆಶೆಯ ಇವರ ಮುನ್ನಡೆಯಲ್ಲಿ ಅನೇಕ ಎಡರು ತೊಡರುಗಳು ಒದಗಿದವು. ಅನೇಕ ಸನ್ನಿವೇಶಗಳಲ್ಲಿ ಇವರ ಜೀವನಕ್ಕೂ ಅಪಾಯ ಸಂಭವಿಸುವ ಸಂದಿಗ್ಧಾವಸ್ಥೆಗಳು ಸಂಭವಿಸಿದ್ದವೆಂಬುದು ವಿಷಾದಕರವಾದ ವಿಷಯ.

## ಮುಂಬೆಳಕು

ಶ್ರೀ ಅಟವೀಂದ್ರ ಶಿವಯೋಗಿಗಳು ತೊಟ್ಟಿಲು ಕೆರೆ ಮಠದಲ್ಲಿ ನಿರ್ಯಾಣವಾಗುವ ಮುನ್ನ ತಮ್ಮ ಮೆಚ್ಚಿನ ಶಿಷ್ಯನನ್ನು ಕರೆಯಿಸಿ ಕೆಲವು ಸೂಚನೆಗಳನ್ನು ಸೂಚಿಸಿ ಹರಸಿ ಕಳುಹಿಸಿದರು. ಅಲ್ಲಿಂದ ಸಿದ್ಧಗಂಗಾ ಕ್ಷೇತ್ರಕ್ಕೆ ಹಿಂತಿರುಗಿದರು. ಈ ಮಠದ ಪರಿಸ್ಥಿತಿಯು ತುಂಬಾ ರಿಕ್ತ ದೆಶೆಯಲ್ಲಿತ್ತು. ಇದ್ದ ಹಲ ಕೆಲವು ವಸ್ತುಗಳೂ ಅಪಹರಿಸಲ್ಪಟ್ಟಿದ್ದವು. ಗುರುಗಳ ಅಗಲಿಕೆಯಿಂದ ನೊಂದ ಈ ಮಹನೀಯ ಮೂರ್ತಿಯು ಇಲ್ಲಿನ ಜನರ ಮನಸ್ಸಿನ ಪರಿಸ್ಥಿತಿಯನ್ನರಿತು ಮತ್ತಷ್ಟು ದುಃಖಿಸಿತು. ಮುಂದೆ ದಿಕ್ಕುತೋಚದೆ ಒಂದು ಗುಹೆಯನ್ನು ಸೇರಿ ತಮ್ಮ ಗುರುವರ್ಯರ ಚರಣಚಿಂತನೆಯನ್ನು ಮಾಡುತ್ತಾ ಮೈಮರೆತಿರುವಲ್ಲಿ ತಮ್ಮ ಗುರುಗಳ ದಿವ್ಯತೇಜೋದರ್ಶನವಾಗಿ ಮುಂಬೆಳಕನ್ನು ಬೀರಲು ಧೈರ್ಯವನ್ನು ಹೊಂದಿ ಗುರುಗಳ ಅನುಜ್ಞೆಯಂತೆ ಅವರ ಗದ್ದುಗೆಯನ್ನು ಕಟ್ಟಿಸಲು ಪ್ರಯತ್ನಿಸಿದರು. ಪ್ರಾರಂಭದಲ್ಲಿ ಒಬ್ಬ ಕುಂಬಾರನಿಂದ ಮಡಕೆಗಳನ್ನು ತಿರುಪೆ ಬೇಡಿಕೊಂಡು ತಮ್ಮ ವ್ಯವಹಾರವನ್ನು ಪ್ರಾರಂಭಿಸಿದರೆಂಬುದು ಇಲ್ಲಿನ ಮೊದಲಿನ ಅವಸ್ಥೆಯನ್ನು ಸೂಚಿಸಲು ಸರಿಯಾದ ನಿದರ್ಶನ.





ಶ್ರೀ ಗುರುವಿನ ಅನುಗ್ರಹದಿಂದ ದಿನೇ ದಿನೇ ನಾನಾ ಕಡೆಗಳಿಂದ ಅನಿರೀಕ್ಷಿತವಾಗಿ ಹರಕೆಗಳ ರೂಪದಿಂದ ನೆರವು ದೊರೆಯತೊಡಗಿತು. ಈ ಮಹನೀಯರು ತಮ್ಮ ಹೆಸರಿಗೆ ಉಚಿತವಾದ (ಉದ್ದಾನ=ಶ್ರೇಷ್ಠದಾನ) ಅನ್ನದಾಸೋಹವನ್ನು ಪ್ರಾರಂಭಿಸಿ, ಜನತೆಯ ಮನವನ್ನು ಸೂರೆಗೊಂಡರು.

ಇವರ ಯೋಗನಿಷ್ಠೆ, ತಪಶ್ಶಕ್ತಿ, ಔದಾರ್ಯ, ಸರಳ ಜೀವನ, ತ್ಯಾಗಶೀಲತೆ, ಸರ್ವಸಮತಾಭಾವ ಮತ್ತು ಕ್ರಿಯಾಸಿದ್ಧಿ ಇವೇ ಮುಂತಾದ ಗುಣಗಣವು ವೈರಿಗಳ ಹೃದಯವನ್ನು ಭೇದಿಸಿ ತನ್ನ ಪಾದತಲದಲ್ಲಿ ಮಣಿಯುವಂತೆ ಮಾಡಿತು. ಇವರ ಅಲೌಕಿಕ ತೇಜಸ್ಸಿನಲ್ಲಿ ಅವರ ಕ್ಷುದ್ರತೆಯು ಶಲಭಾಯ ಮಾನವಾಯಿತು. ಮಹಾಸ್ವಾಮಿಯವರು ತಮ್ಮ ಗುರುವರ್ಯರಿಂದ ಸ್ಥಾಪಿಸಲ್ಪಟ್ಟಿದ್ದ 'ಸಂಸ್ಕೃತ ಮತ್ತು ವೇದಪಾಠಶಾಲೆ'ಯನ್ನು ಮತ್ತೆ ಆರಂಭಿಸಿದರು. ೧೯೧೭ನೆಯ ವರ್ಷದಿಂದ ನಮ್ಮ ಘನ ಸರ್ಕಾರದವರು ಈ ಪಾಠಶಾಲೆಯ ಅಭಿವೃದ್ಧಿಯನ್ನರಿತು ಪ್ರಾರಂಭದಲ್ಲಿ ಹತ್ತು ರೂಪಾಯಿಗಳ ಗ್ರಾಂಟನ್ನು ಕೊಡಲು ಆರಂಭಿಸಿದರು. ಇಂದು ಈ ಪಾಠಶಾಲೆಯು ನಮ್ಮ ಮೈಸೂರು ವಿದ್ಯಾಭ್ಯಾಸದ ಇಲಾಖೆಯುವರಿಂದ 'ಸಂಸ್ಕೃತ ಕಾಲೇಜ್' ಎಂದು ಅಂಗೀಕರಿಸಲ್ಪಟ್ಟಿರುವುದಲ್ಲದೆ ೨೧೦ ರೂಪಾಯಿಗಳ ಮಾಸಿಕ ಗ್ರಾಂಟನ್ನು ಪಡೆಯುತ್ತಿರುವುದ ಹರ್ಷದಾಯಕವಾದ ವಿಷಯವಾಗಿದೆ.

ತಾವು ಹೆಚ್ಚು ವಿದ್ಯಾವಂತರಲ್ಲದಿದ್ದರೂ ಶ್ರೀಯವರಿಗೆ ವೇದಾದಿ ಧರ್ಮಶಾಸ್ತ್ರಗಳಲ್ಲಿ ಅಮಿತವಾದ ಶ್ರದ್ಧೆ. ವಿದ್ವಾಂಸರಲ್ಲಿ ಅತಿಶಯವಾದ ವಿಶ್ವಾಸ. ಇಡೀ ಗ್ರಂಥಕೋಟಿಗೆ ತಿರುಳಿನಂತಿರುವ 'ಪರೋಪಕಾರ'ವೆಂಬುದು ಅವರ ಜೀವನದ ಸಾರಸರ್ವಸ್ವ. 'ಊಟಮಾಡಿರಿ' ಎಂಬುದು ಅವರ ದಿವ್ಯ ಪಂಚಾಕ್ಷರಿಯ ಮಂತ್ರ. ಭೂತತೃಪ್ತಿಯೇ ಅವರ ಅಂತರಾತ್ಮನ ಅಂತರ್ಜ್ಯೋತಿ. ಅವರ ಆದರ್ಶ ಜೀವನವು ಮಾನವ ಲೋಕದ ತಾರಕ ಮಂತ್ರ.

ವೀರಶೈವ ಸಮಾಜದಲ್ಲಿ ಇಂದು ಗುರು-ವಿರಕ್ತವರ್ಗದಲ್ಲಿ ಗೊಂದಲವೆದ್ದು ವೀರಶೈವ ಸಮಾಜವು ದಿನೇ ದಿನೇ ಅಧಃಪತವನ್ನೈದುತ್ತಿರುವುದು ಸರ್ವರಿಗೂ ವೈದ್ಯವಿದೆ. ಇಂತಹ ಗೊಂದಲಕ್ಕೆ ನಮ್ಮ ಶಿವಯೋಗಿಗಳು ಮನವೀಯದಿದ್ದುದು ಮಾತ್ರವಲ್ಲದೆ ವಿದ್ಯಾಭ್ಯಾಸ, ದಾಸೋಹ ಮಾತ್ರವೇ ತಮ್ಮ ಕರ್ತವ್ಯವೆಂದು ನಡೆದು ತೋರಿಸಿರುವರೆಂಬುದು ನಮ್ಮ ಇಂದಿನ ಗುರುವಿರಕ್ತ ವರ್ಗಕ್ಕೆ ಮಾದರಿಯ ದೃಶ್ಯ.

ಇಂದಿನ ಅನೇಕ ಗುರುಗಳು ಬಿರುದು ಬಾವಲಿಗಳ ಆಡಂಬರದಲ್ಲಿ ಸಿಕ್ಕಿಬಿದ್ದು ಕರ್ತವ್ಯ ಪರಾಙ್ಮುಖರಾಗಿರುವಲ್ಲಿ ನಮ್ಮ ಶಿವಯೋಗಿಗಳು ಅವುಗಳಿಗೆ ಎಳ್ಳಷ್ಟೂ ಬೆಲೆಗೊಡುತ್ತಿರಲಿಲ್ಲವೆಂಬುದು ಅವರ ಸೇವಾಭಾವವನ್ನು ಅರಿತ ಸರ್ವರ ನೆನಪಿನಲ್ಲಿದೆ. ಯಾರಾದರೂ ಉತ್ಸವ ಮಾಡಲು ಬಿನ್ನೈಸಿದರೆ 'ನನ್ನ ಹೆಸರಿನಲ್ಲಿ ಅನ್ನದಾನ ಮಾಡಿರೆಂದು' ದಿಟ್ಟತನದಿಂದ ಹೇಳಿದ ಹಲವಾರು ಉದಾಹರಣೆಗಳು ಜನರ ಹೃದಯದಲ್ಲಿ ಪ್ರತಿಧ್ವನಿಸುತ್ತಿವೆ! ಅಂತಹ ಶಕ್ತಿಯನ್ನು ಅರಿತ ಪ್ರತಿಯೊಬ್ಬರೂ ಅವರು ಬಯಸಿದುದನ್ನೀಯಲು ಸಿದ್ಧರಾಗಿದ್ದರು.

ಇವರು ಶಿವರಾತ್ರಿಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯನ್ನು ಏರ್ಪಡಿಸಿ ದನಗಳ ಪರಿಷೆಯನ್ನೂ ಪ್ರಾರಂಭಿಸಿದರು. ಪ್ರತಿವರ್ಷವೂ ಜಾತ್ರೆಯ ಕಾಲದಲ್ಲಿ ಸುಮಾರು ೩೦-೪೦ ಸಹಸ್ರ ಮಂದಿಗೆ ಮಠದಿಂದಲೇ ದಾಸೋಹವನ್ನು ನಡೆಯಿಸುವ ಅದ್ಭುತ ಚಿತ್ರವು ಇಡೀ ದಕ್ಷಿಣ ಭಾರತದಲ್ಲಿ ಏಕಮಾತ್ರ ಸಂಸ್ಥೆಯದೆಂದರೆ ಅತಿಶಯೋಕ್ತಿಯೇನಲ್ಲ. ಇವರ ದಾಸೋಹದಲ್ಲಿ ಅಂತ್ಯಜನಿಂದ ಹಿಡಿದು ಅರಸನವರೆಗೂ ತೃಪ್ತಿ ಪಡೆದಿದ್ದಾರೆ. ಮೇಲು ಕೀಳುಗಳ ಕೊಳೆಯು ಅವರ ಹೃದಯಕೋಶವನ್ನು ಸ್ಪರ್ಶಿಸಿರಲಿಲ್ಲ. ಕ್ರಿಯಾಸಿದ್ಧರಾದ ಶ್ರೀಯವರ ಅವಿಶ್ರಾಂತ ಪರಿಶ್ರಮದ ಫಲವಾಗಿ ಸ್ಥಾನಮಾತ್ರಾವಶೇಷವಾಗಿದ್ದ ಈ ಕ್ಷೇತ್ರವು ಇಂದು ಸುಮಾರು ಒಂದು ಲಕ್ಷ ರೂಪಾಯಿಗಳ ಕಟ್ಟಡಗಳಿಂದಲೂ, ಸುಮಾರು ೩೦೦ ಎಕರೆ ಭೂ ಆಸ್ತಿಯಿಂದಲೂ, ಪಾಠಶಾಲೆಯ ಅಭಿವೃದ್ಧಿಗಾಗಿ ಮೂವತ್ತು ಸಹಸ್ರ ರೂ. ಮೂಲಧನದಿಂದಲೂ ಕೂಡಿದೆಯೆಂಬುದು ಶ್ರೀ ಉದ್ದಾನ ಶಿವಯೋಗಿಗಳ ಅದ್ಭುತ ಆತ್ಮಶಕ್ತಿಗೆ ನಿದರ್ಶನವಾಗಿರುತ್ತದೆ.

ಇವರು ಆಂಗ್ಲಭಾಷೆ ಮತ್ತು ಸಂಸ್ಕೃತ ಭಾಷಾಭಿಜ್ಞರಾದ ಶ್ರೀ ಶಿವಕುಮಾರ ಸ್ವಾಮಿಗಳವರನ್ನು ಉತ್ತರಾಧಿಕಾರಿಗಳನ್ನಾಗಿ ನಿಯಮಿಸಿ, ಇದೇ ೧೧-೧-೧೯೪೧ನೆಯ ಶನಿವಾರ ರಾತ್ರಿ ೧೧-೪೫ಕ್ಕೆ ಇವರ ಜೀವಜ್ಯೋತಿಯು ಪರಂಜ್ಯೋತಿಯಲ್ಲಿ ಅಡಗಿ ಅಮರಾನಂದವನ್ನೈದಿತು. ಇವರು ತಮ್ಮ ಜೀವನದ ದೀವಿಗೆಯಿಂದ ಜನಮನವನ್ನು ಬೆಳಗಿಸಿ ಕೃತಕೃತ್ಯರಾದರು. ಇವರ ಜೀವನ ಯಾತ್ರೆಯು ಇಡೀ ಗುರುವರ್ಗ ಅಷ್ಟೇ ಏಕೆ ಮಾನವ ವರ್ಗಕ್ಕೇ ಆದರ್ಶಪ್ರಾಯವಾಗಿದೆ. ಜಗನ್ಮಯನಾದ ಪರಶಿವನು ಇವರ ಆತ್ಮಕ್ಕೆ ಅವಿರಳಾನಂದವನ್ನೀಯಲೆಂದು ಹಾರೈಸುವ ಮುಂದಿನ ಗೀತೆಯು ಅವರ ಜೀವನ ಯಾತ್ರೆಯ ದಿಗ್ದರ್ಶಕ ದರ್ಪಣವು ಮಾತ್ರ. ಇದು ಮುದ್ದಾದ ಮುಕುರವಾಗಿ ಮಾನವ ಲೋಕದ ಮನವನ್ನು ಪ್ರತಿಬಿಂಬಿಸಲು ನೆರವಾಗುವುದ ಮಾತ್ರ ಲೇಖಕನ ಪರಿಶ್ರಮದ ಪ್ರತಿಫಲ.

(ಲಿಂಗೈಕ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಮೊದಲ ಪುಣ್ಯಾರಾಧನೆಯ ಸಂದರ್ಭದಲ್ಲಿ ಪ್ರಕಟವಾದ 'ಜೀವನ ಜ್ಯೋತಿ' ಯಿಂದ ಆಯ್ದ ಲೇಖನ)

*ಸಂಗ್ರಹ : ವಿದ್ವಾನ್ ಶ್ರೀ ಬಿ. ಗಂಗಪ್ಪ*

# ಸಿದ್ಧರಾಮಣ್ಣನ ಒಂದು ವಚನ - ವಿಶ್ಲೇಷಣೆ

- ಡಾ|| ಎಸ್. ವಿದ್ಯಾಶಂಕರ್
ನಂ. 138, 7ನೇ 'ಸಿ' ಮುಖ್ಯರಸ್ತೆ,
ವಿಜಯನಗರ 2ನೇ ಹಂತ, ಬೆಂಗಳೂರು-560040

*ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ*
*ಭಾರತವೆಂದಡೆ ಭರತ ದೇಶದಲ್ಲಿ ಜನಿಸಿ,*
*ಕಾಮಿನಿಯರ ಸೋಗು ಹಾಕಿ,*
*ಆ ದೇಶಕ್ಕಧಿಯಾದ ಕಥೆಯ ಭಾರತವಯ್ಯಾ,*
*ರಾಮಾಯಣವೆಂದಡೆ ಆದಿನಾರಾಯಣನು*
*ಪೃಥ್ವಿಯೊಳು ಪುಟ್ಟಿ, ರಾಮನೆಂಬಭಿದಾನವ ಧರಿಸಿ,*
*ಸರ್ವರಂತೆ ಪ್ರಪಂಚವ ಮಾಡಿ*
*ರಾಕ್ಷಸರ ಗರ್ವವನಳಿದುದೆ ರಾಮಾಯಣ*
*ಮಾಡಿ ಉದ್ಧಟವಾದಲ್ಲಿ ಕಾಲಾಂತರದಲಾದರೂ*
*ಕುರುಹಿನೊಳಗಾದವಯ್ಯಾ*
*ಕಪಿಲಸಿದ್ಧ ಮಲ್ಲಿಕಾರ್ಜುನಾ*

- ಸಿದ್ಧರಾಮ

ಸಿದ್ಧರಾಮನ ಈ ವಚನ ಮೇಲುನೋಟಕ್ಕೆ ಭಾರತ-ರಾಮಾಯಣಗಳನ್ನು ಖಂಡಿಸುವಂತಿದ್ದರೂ, ಅಷ್ಟಕ್ಕೇ ಅದರ ಉದ್ದೇಶ ಸೀಮಿತವಾಗಿರುವಂತಿಲ್ಲ. ಬಹುಶಃ ಇದು ಪರಂಪರೆಯಿಂದ ಪುರೋಹಿತಶಾಹಿಯ ಸಾಂಸ್ಕೃತಿಕ ದಬ್ಬಾಳಿಕೆಗೆ ಗುರಿಯಾಗಿದ್ದ, ಶೂದ್ರವರ್ಗದ ಸಾಂಕೇತಿಕ ಪ್ರತಿಕ್ರಿಯೆಯಾಗಿ ತೋರುತ್ತದೆ. ವೇದ, ಶಾಸ್ತ್ರ, ಆಗಮ, ಉಪನಿಷತ್ತು, ಪುರಾಣ ಇವೆಲ್ಲವೂ ಪುಸ್ತಕ ವಿದ್ಯೆ, ಉತ್ತಮರ ಸೊತ್ತು. ಇವುಗಳನ್ನು ಶೂದ್ರರು ಕಲಿಯಕೂಡದು, ಕೇಳಕೂಡದು. ಇವುಗಳು ದೇವವಾಣಿ ಯಾಗಿರುವುದರಿಂದ ಇಲ್ಲಿ ಬಂದಿರುವುದೇ ಪ್ರಮಾಣ ಎಂದು ಸಮಯೋಚಿತವಾಗಿ ಇವುಗಳಲ್ಲಿನ ಶ್ಲೋಕಗಳನ್ನು ಹೇಳಿ ಉತ್ತಮರೆನ್ನಿಸಿಕೊಂಡವರು ಸಮರ್ಥಿಸಿಕೊಳ್ಳುತ್ತಿದ್ದರು. ಇದನ್ನು ಒಪ್ಪದ ಶಿವಶರಣರು ಜ್ಞಾನವು (ವಿದ್ಯೆಯು) ವ್ಯಕ್ತಿಯ ಹುಟ್ಟಿನ ಹಿರಿತನದಿಂದಾಗಲೀ, ಓದಿನ ಬಲದಿಂದಾಗಲೀ ಬರುವಂತಹದ್ದಲ್ಲ. ವೇದ, ಆಗಮ, ಪುರಾಣಾದಿಗಳು ಜ್ಞಾನದ ಪರಮ ಸೀಮೆಯೂ ಅಲ್ಲ ಎಂದು ನಂಬಿದ್ದರು. ಸನಾತನಿಗಳು ವೇದಗಳನ್ನು ಅಸ್ಪೃಶ್ಯರು ಕೇಳಕೂಡದೆಂದು ಬೆದರಿಕೆಯೊಡ್ಡಿದಾಗ ಮಡಿವಂತಿಕೆಗೆ ಒಳಗಾದ ಆ ಜ್ಞಾನದ ಹಂಗು ತಮಗೆ ಬೇಡವೇ ಬೇಡವೆಂದು ಶಿವಶರಣರು ತಿರಸ್ಕರಿಸಿದರು. ಉದಾಹರಣೆಗೆ ಕೆಲವು ಉಲ್ಲೇಖಗಳನ್ನು ನೋಡಬಹುದು :

*ವೇದ ಶಾಸ್ತ್ರ ಆಗಮ ಪುರಾಣಂಗಳೆಲ್ಲವೂ*
*ಕೊಟ್ಟಣವ ಕುಟ್ಟಿದ ನುಚ್ಚು ತೌಡು ಕಾಣಿ ಭೋ !*
*ಇವ ಕುಟ್ಟಲೇಕೆ ಕುಸುಕಲೇಕೆ?*
*ಅತ್ತಲಿತ್ತ ಹರಿವ ಮನದ ಶಿರವನರಿದಡೆ*
*ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನಾ*

- ಅಕ್ಕಮಹಾದೇವಿ

*ವೇದ ವಿಪ್ಪರ ಬೋಧೆ, ಶಾಸ್ತ್ರ ಸಂತೆಯ ಮಾತು,*
*ಪುರಾಣ ಪುಂಡರ ಗೋಷ್ಠಿ, ಆಗಮ ಅನ್ಯತದ ನುಡಿ*
*ತರ್ಕ ವ್ಯಾಕರಣ ಕವಿತ್ವ ಪ್ರೌಢಿ.....*

- ಮಡಿವಾಳ ಮಾಚಿದೇವ

*ವೇದ ನಾಲ್ಕನು ಓದಿದಡೇನು?*
*ಶಾಸ್ತ್ರವ ನೆ... ಕೇಳಿದಡೇನು?*
*ಶಿವಜ್ಞಾನಹೀನರು ಬಲ್ಲರೆ ಭಕ್ತಿಯ ಪಥವ...*
*ಕ್ಷೀರದೊಳಗಣ ಸಟ್ಟುಗ ಸವಿ ಸ್ವಾದುಗಳ ಬಲ್ಲುದೆ?*
*ಓದಿದ ನಿರ್ಣಯವ ನಮ್ಮ ಮಾದಾರ ಚೆನ್ನಯ್ಯ*
*ಮಡಿವಾಳಯ್ಯ, ಡೋಹರ ಕಕ್ಕಯ್ಯನವರು ಬಲ್ಲರು.*

- ಸಂಗಮೇಶ್ವರ ಅಪ್ಪಣ್ಣ

*ಶಾಸ್ತ್ರವೆಂಬುದು ಮನ್ಮಥ ಶಸ್ತ್ರವಯ್ಯಾ*
*ವೇದಾಂತವೆಂಬುದು ಮೂಲ ಮನೋವ್ಯಾಧಿಯಯ್ಯಾ.*
*ಪುರಾಣವೆಂಬುದು ಮೃತವಾದವರ ಗಿರಾಣವಯ್ಯಾ,*
*ತರ್ಕವೆಂಬುದು ಮರ್ಕಟಾಟವಯ್ಯಾ*
*ಆಗಮವೆಂಬುದು ಯೋಗದ ಘೋರವಯ್ಯಾ*
*ಇತಿಹಾಸವೆಂಬುದು ಯೋಗದ ಘೋರವಯ್ಯಾ*
*ಸ್ಮೃತಿಯೆಂಬುದು ಪಾಪ ಪುಣ್ಯ ವಿಚಾರವಯ್ಯಾ*
*ಆದ್ಯರ ವಚನವೆಂಬುದು ಬಹುವೇದ್ಯವಯ್ಯಾ*
*ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ತಿಳಿಯಲಿಕ್ಕೆ*

- ಸಿದ್ಧರಾಮ

ಪುಸ್ತಕ ವಿದ್ಯೆಯು ಉತ್ತಮರ ಸೊತ್ತಲ್ಲ, ಸೊತ್ತಾಗಬಾರದು; ಅದು ಎಲ್ಲರಿಗೂ ಸಿಗುವಂತಾಗಬೇಕು. ಶಿವಶರಣರು ಹನ್ನೆರಡನೆಯ ಶತಮಾನದಲ್ಲಿ ವೈಚಾರಿಕ ಕ್ರಾಂತಿಗೆ ಕರೆಕೊಟ್ಟುದು ಈ ಉದ್ದೇಶದಿಂದಲೇ. ಅಂಬಿಗರ ಚೌಡಯ್ಯನು ಮೇಲುವರ್ಗದವರು ಪರಮಾರ್ಥಬೋಧನೆಯನ್ನು ಸಂಸ್ಕೃತದಲ್ಲಿ ಮರೆಮಾಡಿ ಸಾಮಾನ್ಯನಿಗೆ ತಿಳಿಯದಂತೆ ನುಡಿಯುವುದನ್ನು ಖಂಡಿಸುವನು.

*ವಚನಾರ್ಥವ ಕಂಡಹರೆಂದು*
*ರಚನೆಯ ಮರೆ ಮಾಡಿ ನುಡಿಯಲೇತಕ್ಕೆ?*
*ದಾರಿಯಲ್ಲಿ ಸರಕು ಮರೆಯಲ್ಲದೆ*
*ಮಾರುವಲ್ಲಿ ಮರೆಯುಂಟೆ?*
*ತಾನರಿವಲ್ಲಿ ಮರೆಯಲ್ಲದೆ*
*ಬೋಧೆಗೆ ಮರೆಯಿಲ್ಲವೆಂದನಂಬಿಗ ಚೌಡಯ್ಯ*

ಸಿದ್ಧರಾಮನಿಗೆ 'ವಚನ'ವು ಕೇವಲ ಅಭಿವ್ಯಕ್ತಿ ಮಾಧ್ಯಮವಲ್ಲ, ಅದು ಪರಮಾತ್ಮನನ್ನು ತಿಳಿಯಲು ನೆರವಾಗುವ ಸಾಧನ. ಅದು ತನಗಿಂತ ಹಿಂದೆ ಇದ್ದಂತಹ (ಆದ್ಯರ) 'ಆಜ್ಞೆ'. ಅದು 'ಈಶ್ವರಗೆ ಬೆಳಗುವ ಜ್ಯೋತಿ'. ಅದು ನಮ್ಮ ನಡಾವಳಿಗಳನ್ನು ತಿದ್ದಿಕೊಳ್ಳುವ ಒರೆಗಲ್ಲು. 'ನಮ್ಮ ನಡಾವಳಿಗೆ ನಮ್ಮ ಪುರಾತನರ ನುಡಿಯೆ ಇಷ್ಟವಯ್ಯಾ' ಎನ್ನುವ ಸಿದ್ಧರಾಮ. ಮಾತಿಗಿಂತ ನಡೆಗೆ. ಅನುಭವಕ್ಕೆ ಹೆಚ್ಚಿನ ಪ್ರಾಧಾನ್ಯ ನೀಡುವ ಸಿದ್ಧರಾಮ 'ಅನುಭವವೆಂಬುದು ಅನುಭಾವಿಕಗಲ್ಲದೆ ಹೊತ್ತುಗೆಯಲ್ಲಿಲ್ಲ ನೋಡಾ' ಎಂದಿರುವನು. ಅಷ್ಟೇ ಅಲ್ಲ, ಅವನು ಅನುಭವಿ ಹಾಗೂ ಪಂಡಿತ ಇವರ ನಡುವಿರುವ ವ್ಯತ್ಯಾಸವನ್ನು ಹೀಗೆ ಗುರುತಿಸುವನು:

*ವಚಿಸಿ ವಚಿಸಿ ಅನುಭವಿಯಾಗದವ ಪಿಶಾಚಿಯಯ್ಯಾ*
*ವಚಿಸಿ ಅನುಭವಿಯಾದವ ಪಂಡಿತನಯ್ಯಾ*
*ವಿದ್ಯೆ ಎಂಬುದು ಅಭ್ಯಾಸಿಕನ ಕೈವಶ*
*ಅವಿದ್ಯೆಯೆಂಬುದು ಸರ್ವರಲ್ಲಿ ವಶ*
*ಅವಿದ್ಯೆಯೆಂಬುದು ಸರ್ವರಲ್ಲಿ ವಶ.*
*ವಿದ್ಯಾವಿದ್ಯೆಯನರಿತು ಜಗದ್ವೇದ್ಯನಾಗಬಲ್ಲಡೆ,*
*ಮಹಾಪಂಡಿತ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.*

ಪಾಂಡಿತ್ಯಕ್ಕಿಂತ ಅನುಭಾವಕ್ಕೆ, ಹೃದಯ ಶುದ್ಧಿಗೆ, ಸರ್ವ ಜೀವಾನುಕಂಪೆಗೆ ಹೆಚ್ಚಿನ ಮಹತ್ವ ನೀಡಬೇಕೆಂಬುದು ಬಸವಾದಿ ಶಿವಶರಣರ ಆಶಯ. ಈ ಹಿನ್ನೆಲೆಯಲ್ಲಿ 'ವಿದ್ಯೆ ಎಂದಡೆ ಭಾರತ...ರಾಮಾಯಣವಲ್ಲ....' ಎಂಬ ವಚನವನ್ನು ಪರಿಭಾವಿಸಬೇಕು.

ಭಾರತವನ್ನು 'ಪಂಚಮ ವೇದ'ವೆಂದೂ ಭಾರತ-ರಾಮಾಯಣಗಳು ಮಹಾಕಾವ್ಯಗಳೆಂದೂ, ಅವುಗಳ ರಚಕರಾದ ವ್ಯಾಸ-ವಾಲ್ಮೀಕಿ ಮಹಾಕವಿಗಳೆಂದೂ, ಅವುಗಳನ್ನು ಪಠಿಸಿದರೆ ಇಹ-ಪರ ಸುಖ ಪ್ರಾಪ್ತಿಯಾಗುವುದೆಂದೂ ಹಿಂದಿನಿಂದಲೂ ಜನ ನಂಬಿಕೊಂಡು ಬಂದಿದ್ದರು. ಈ ನಂಬಿಕೆಯ ಹಿಂದೆ ಪುಸ್ತಕವಿದ್ಯೆಯೇ ವಿದ್ಯೆ ಎನ್ನುವ ಆಳವಾಗಿ ಬೇರುಬಿಟ್ಟ ತಿಳುವಳಿಕೆ ಪರಂಪರಾನುಗತವಾಗಿ ನಮ್ಮನ್ನು ಆಳುತ್ತ ಬಂದಿದೆ. ಅರ್ಜುನನನ್ನು ಶೌರ್ಯದ ಸಂಕೇತವಾಗಿಯೂ ರಾಮನನ್ನು ಆದರ್ಶ ವ್ಯಕ್ತಿಯನ್ನಾಗಿಯೂ ಭಾರತ-ರಾಮಾಯಣ ಮಹಾಕಾವ್ಯಗಳು ಚಿತ್ರಿಸಿವೆ. ಇದು ಪುಸ್ತಕ ವಿದ್ಯೆಯಿಂದ ಸಾಧ್ಯವಾಯಿತು. ಈ ಮಹಾಕಾವ್ಯಗಳು ಅಜರಾಮರ ಕಾವ್ಯಗಳೆಂದು ಹೇಳುವವರೆವಿಗೂ ವಿಮರ್ಶೆ ಸಾಗಿತು. ಪರಂಪರೆಯಿಂದ ವಂಚಿತರಾದವರನ್ನು, ಸಾಮಾಜಿಕ ಸವಲತ್ತುಗಳಿಂದ ವಂಚಿತರಾದವರನ್ನು ಮೇಲೆತ್ತುವ ಮಹತ್ತರ ಕಾರ್ಯ ೧೨ನೇ ಶತಮಾನದ ಸಮಾಜೋಧಾರ್ಮಿಕ ಚಳುವಳಿಯಲ್ಲಿ ಪ್ರಮುಖವಾದಾಗ ವಿದ್ಯೆ ಎಂಬುದು ಉತ್ತಮರಿಗೇ ಮೀಸಲಾದುವೆಂಬ ತತ್ವಕ್ಕೆ ಬೆಲೆಯಿಲ್ಲವಾಯಿತು. 'ವಿದ್ಯೆ ಎಂಬುದು ಅಭ್ಯಾಸಿಕನ ಕೈವಶ' ಎಂದು ಸಿದ್ಧರಾಮ ಹೇಳುವ ಮೂಲಕ ವ್ಯಕ್ತಿಯು ಪರಿಶ್ರಮದಿಂದ ಗಳಿಸುವಂತಹದ್ದು ವಿದ್ಯೆ ಎಂಬ ಭಾವಕ್ಕೆ ಒತ್ತು ಬಿದ್ದಿತು. ಅಷ್ಟೇ ಅಲ್ಲ, ಲೌಕಿಕ ವಿದ್ಯೆಯೇ ನಿಜವಾದ ವಿದ್ಯೆ ಎನ್ನುವ ನಂಬಿಕೆಗೂ ಬೆಲೆ ಕಡಿಮೆಯಾಯಿತು. ಏಕೆಂದರೆ, ವಚನಕಾರರಲ್ಲಿ ಬಹಳಷ್ಟು ಮಂದಿ ಕೆಳವರ್ಗದಿಂದ ಬಂದವರಾಗಿದ್ದರು; ವಿದ್ಯೆಯಿಂದ, ಸಾಮಾಜಿಕ ಸವಲತ್ತುಗಳಿಂದ ವಂಚಿತರಾದವರಾಗಿದ್ದರು. ಅವರು

ವಿದ್ಯಾವಂತರಲ್ಲದಿದ್ದರೂ ಲೌಕಿಕ ಭೋಗಭಾಗ್ಯಗಳು ಅವರಲ್ಲಿ ಇಲ್ಲದಿದ್ದರೂ ತೃಪ್ತಿಯ ಬದುಕು ಸಾಗಿಸಿದ್ದರು. ತಮ್ಮ ಬದುಕನ್ನು ಲೌಕಿಕದಿಂದ ಅಲೌಕಿಕದತ್ತ ಹೊರಳಿಸುವ ತಿಳುವಳಿಕೆಯನ್ನೂ ಅವರು ಹೊಂದಿದ್ದರು. ಅವರಿಗೆ ಪುಸ್ತಕ ಒದಗಿಸುವ ವಿದ್ಯೆಗಿಂತ ಬದುಕು ಕಲಿಸುವ ಪಾಠ ಮುಖ್ಯವಾಗಿದ್ದಿತು. ಸತ್ಯ ಸದಾಚರಣೆಗಳ ಮೂಲಕ ತಮ್ಮನ್ನು ತಾವು ನೇರ್ಪಡಿಸಿಕೊಳ್ಳುವ ಸುಖದ ಬೆನ್ನುಹತ್ತಿಹೋಗದೆ ಅಲೌಕಿಕ ಸುಖದ ಬೆನ್ನುಹತ್ತಿಹೋಗುವ 'ಆತ್ಮವಿದ್ಯೆ'ಯ ಅರಿವು ಶರಣರ ಸಂಗದಿಂದ ಲಭ್ಯವಾಗಿತ್ತು. ಈ ವಾಸ್ತವದ ಗಟ್ಟಿ ನೆಲೆಯಲ್ಲಿ ಸಿದ್ಧರಾಮ 'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ' ಎಂಬ ನಿಲುವಿಗೆ ಬಂದುದು. ಅವನ ಪಾಲಿಗೆ ಭಾರತವಾಗಲೀ ರಾಮಾಯಣವಾಗಲೀ ಅಜರಾಮರವಲ್ಲ; ಅವುಗಳ ನಾಯಕರೂ ಅಜರಾಮರರಲ್ಲ. ಭರತದೇಶದಲ್ಲಿ ಹುಟ್ಟಿ ಅರ್ಜುನನು ವಿರಾಟನ ಆಸ್ಥಾನದಲ್ಲಿ ಬೃಹನ್ನಳೆಯಾಗಿ ವೇಷ ಧರಿಸಿ, ಕಾಲ ಕಳೆದು ಮಹಾಭಾರತ ಯುದ್ಧಾನಂತರ ಆ ದೇಶಕ್ಕೆ ಅಧಿಪತಿಯಾದ ಕಥೆಯೆ ಭಾರತ, ಆದಿನಾರಾಯಣನು ಭೂಮಿಯಲ್ಲಿ ಜನಿಸಿ ರಾಮನೆನ್ನುವ ಹೆಸರು ಧರಿಸಿ, ಜನ ಮೆಚ್ಚುವಂತೆ ರಾಜ್ಯಭಾರ ಮಾಡಿ ರಾಕ್ಷಸ ರಾವಣನನ್ನು ವಧಿಸಿ ಅವನ ಗರ್ವವಳಿದ ಕಥೆಯೇ ರಾಮಾಯಣ. ದುರ್ಯೋಧನ ರಾವಣರು ಉದ್ಧಟರಾಗಿ ವರ್ತಿಸಿ ಕಾಲಾಂತರದಲ್ಲಿ ನಾಶವನ್ನು ಹೊಂದಿದರು. ಭಾರತ-ರಾಮಾಯಣಗಳು ಚಾಮರಸ ಹೇಳುವಂತೆ 'ಕಾಳಗದ ಕಥೆಗಳು', ಜನನ-ಮರಣದ ಕುತ್ತನ್ನು ಕಳೆದುಕೊಂಡವರು ಕಥೆಗಳಲ್ಲ.

ಶಿವಶರಣರಲ್ಲಿ ಬಹಳಷ್ಟು ಮಂದಿ ಕೆಳವರ್ಗದವರು; ಹೆಚ್ಚಿನ ವಿದ್ಯಾಭ್ಯಾಸವನ್ನು ಪಡೆದವರೂ ಅಲ್ಲ. ಅವರು ತಮ್ಮ ದಿನನಿತ್ಯದ ಅನುಭವ-ಅನುಭಾವಗಳನ್ನೇ ಸರಳವಾಗಿ ಜನರಿಗೆ ತಿಳಿಯುವಂತೆ ಹೇಳಿದರು. ವಿದ್ಯೆಯೆಂಬುದು ಸಾಮಾಜಿಕ ನೆಲೆಯಲ್ಲಿ ಗೌರವದ ಸಂಕೇತವಾಗಿದ್ದರೂ ಅವರು ಧೈರ್ಯಗೆಡಲಿಲ್ಲ. ಅವರಲ್ಲಿನ ಆತ್ಮವಿಶ್ವಾಸ ತಮ್ಮ ಅನುಭವ ಅನುಭಾವಗಳಿಗೆ ಮಾತಿನ ರೂಪ ತೊಡಿಸಿತು. ಪುಸ್ತಕ ವಿದ್ಯೆಯಿಂದ ವಂಚಿತರಾದರೂ ಅವರ ಬದುಕು ಕಲಿಸಿಕೊಡುವ ವಿದ್ಯೆಯಿಂದ ವಂಚಿತರಾಗಲಿಲ್ಲ. ಹೀಗಾಗಿ ಅವರ ಬದುಕು ಸಂಪನ್ನವಾಯಿತು. ತಾವು ಕಂಡುಕೊಂಡ ಶಾಶ್ವತ ಜೀವನಮೌಲ್ಯಗಳನ್ನು ಅವರು ಬೇರೆಯವರಿಗೂ ತಮ್ಮ ವಚನಗಳ ಮೂಲಕ ತಿಳಿಯಹೇಳಿದರು. ಬಸವಣ್ಣನವರು ಹೇಳಿದಂತೆ 'ಶರಣರು ಮನದೆರೆದು ಮಾತನಾಡಿದಡೆ ಲಿಂಗವ ಕಾಣಬಹುದು!', 'ಪುಸ್ತಕ ವಿದ್ಯೆಯೇ ವಿದ್ಯೆ' ಎನ್ನುವವರ ಭಾವನೆ ಹುಸಿಯೆನ್ನುವಂತೆ ಬಸವಣ್ಣನವರ ಕೆಳಗಿನ ವಚನವಿರುವುದನ್ನು ನಾವು ಪರಿಭಾವಿಸಬಹುದು;

*ಹಾಲ ತೊರೆಗೆ ಬೆಲ್ಲದ ಕೆಸರ ಸಕ್ಕರೆಯ ಮಳಲು*
*ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು*
*ಬೇರೆ ಬಾವಿಯ ತೋಡಿ ಉಪ್ಪುನೀರನುಂಬವನ ವಿಧಿಯಂತೆ*
*ಆಯಿತ್ತೆನ್ನಮತಿ, ಕೂಡಲಸಂಗಮದೇವಾ.*

□

*ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ*
*ಹಾವಿನ ಸಂಗವೇ ಲೇಸು ಕಂಡಯ್ಯ.*
*ಕಾಯವಿಕಾರವ ಕಳೆದು ಕಾಯದಲಿರ್ದರೆ*
*ಕಾಯದ ಸಂಗವೇ ಲೇಸು ಕಂಡಯ್ಯ*
*ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು.*
*ಚೆನ್ನಮಲ್ಲಿಕಾರ್ಜುನಯ್ಯಾ, ನೀನೊಲಿದವರು*
*ಕಾಯಗೊಂಡಿದ್ದರೆನಬೇಡ.*

-- ಅಕ್ಕಮಹಾದೇವಿ

*ಕಾಯವೆಂಬ ಕೆರೆಗೆ ತನುವೆಂಬ ಏರಿ, ಮನವೆಂಬ ಕಟ್ಟೆಯ ಕಟ್ಟಿ,*
*ದೃಢವೆಂಬ ತೂಬನು ಇಕ್ಕಬೇಕಯ್ಯಾ.*
*ಆನಂದವೆಂಬ ಜಲವ ತುಂಬಿ, ಸ್ವಾನುಭಾವವೆಂಬ*
*ಸೋಪಾನವ ಹೂಡಬೇಕಯ್ಯ.*
*ಆ ಕೆರೆಯ ಏರಿಯ ಮೇಲೆ ಆಚಾರವೆಂಬ ವೃಕ್ಷವ ಬೆಳೆಯಿಸಿ.*
*ಅರುಹೆಂಬ ಹೂವನು ಅದ್ವೈತವೆಂಬ ಹಸ್ತದಿಂದ ಕೊಯಿದು*
*ಅನುಪಮ ಲಿಂಗಕ್ಕೆ ಪೂಜಿಸಬಲ್ಲರೆ, ಲಿಂಗಾರ್ಚಕರೆಂಬೆ*
*ಈ ಬೇಧವನರಿಯದೆ, ಹುಸಿಯನೆ ಪೂಜಿಸಿ*
*ಗಸಣಿಗೊಳಗಾದ ಪಿಸುಣಿಗಳನು ಲಿಂಗಪೂಜಕರೆಂದು*
*ಎಂತೆಂಬೆನಯ್ಯಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ?*

-- ತೋಂಟದ ಸಿದ್ಧಲಿಂಗ





ಭಾಗ-೨

# ನೀತಿಶಿಕ್ಷಣ ಮತ್ತು ಮೌಲ್ಯಗಳು

- ಪ್ರೊ. ಸಿ.ಹೆಚ್. ಮರಿದೇವರು
'ಕಲ್ಪವೃಕ್ಷ', ಯಲ್ಲಾಪುರ, ಅರಕೆರೆ ಅಂಚೆ, ತುಮಕೂರು ಜಿಲ್ಲೆ

## ಮೌಲ್ಯಶಿಕ್ಷಣದ ಮುಖ್ಯ ತಿರುಳು

ಮೌಲ್ಯಶಿಕ್ಷಣದ ಮುಖ್ಯ ತಿರುಳೇನೆಂದರೆ ಮನುಷ್ಯನ ವ್ಯಕ್ತಿತ್ವವನ್ನು ಸರ್ವಾಂಗ ಸುಂದರವನ್ನಾಗಿಸುವುದು. ಅಂದರೆ ಬೌದ್ಧಿಕ, ಭೌತಿಕ, ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕವಾಗಿ ಸರ್ವತೋಮುಖವಾದ ಬೆಳವಣಿಗೆಗಾಗಿ ಶಿಕ್ಷಣವೀಯಬೇಕು. ಅದು ಸಮಾಜೋ-ಸಾಂಸ್ಕೃತಿಕ ಬೆಳವಣಿಗೆಯ ದೃಷ್ಟಿಯಿಂದಲೂ ಅತ್ಯವಶ್ಯಕ. ಶಿಕ್ಷಣದ ಮುಖ್ಯ ಉದ್ದೇಶವೆಂದರೆ ಅದು ವ್ಯಕ್ತಿಗಳನ್ನು ಬೆಳೆಸುವುದು. ಆದರೆ ಇಂದು ಶಿಕ್ಷಣವು ಕೇವಲ ವಿಷಯಗಳನ್ನು ವರ್ಗಾವಣೆ ಮಾಡುವ ಹಂತಕ್ಕೆ ಇಳಿದುಬಿಟ್ಟಿದೆ ಮತ್ತು ಪರೀಕ್ಷಾ ಫಲಿತಾಂಶಗಳಿಗೆ ಮಾತ್ರ ಸೀಮಿತವಾಗಿರುವಂತಹುದಾಗಿದೆ.

ನಾವು ಮೌಲ್ಯಶಿಕ್ಷಣವನ್ನು ಕುರಿತು ಮಾತನಾಡುವಾಗ ಇತ್ತೀಚಿಗೆ ತೀರಾ ನಿರ್ಲಕ್ಷಿಸಲ್ಪಟ್ಟಿರುವ ಸಾಮಾಜಿಕ, ನೈತಿಕ, ಸೌಂದರ್ಯೋಪಾಸಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಕಡೆ ಗಮನ ನೀಡಬೇಕಾಗುತ್ತದೆ.

ಎರಡನೆಯದಾಗಿ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಶೈಕ್ಷಣಿಕ ಮೌಲ್ಯಗಳ ಸ್ಥಾನವೇನೆಂಬುದನ್ನು ಕಲಿತು ಆಲೋಚಿಸಬೇಕಾಗಿದೆ. ಸ್ವತಂತ್ರ ಭಾರತದಲ್ಲಿ ಪ್ರಾಮಾಣಿಕತೆ ಎನ್ನುವುದು ಮರೀಚಿಕೆಯಾಗಿದೆ. ತಾಳ್ಮೆ ಹಾಗೂ ಸತ್ಯಸಂಧತೆಗಳು ಸಾರ್ವಜನಿಕ ಜೀವನ ಮತ್ತು ವೈಯಕ್ತಿಕ ಜೀವನಗಳೆರಡರಲ್ಲೂ ಶಿಥಿಲವಾಗತೊಡಗಿವೆ. ಎಲ್ಲೆಲ್ಲೂ ಲೂಟಿ, ದಂಗೆ, ಕ್ರೂರತನ ಸಿನಿಕತನ, ದುರಾಶೆ, ಸ್ವಹಿತಾಸಕ್ತಿ, ನಿರ್ಲಕ್ಷ್ಯ ಮನೋಭಾವ ಮತ್ತು ದುಃಖ ಇವು ಮನುಕುಲದ ಶಾಪವಾಗಿ ಹರಡತೊಡಗಿವೆ. ರಾಜಕೀಯ ಜೀವನವಂತೂ ತೀರಾ ಕಲುಷಿತಗೊಂಡಿದೆ. ನಿರ್ಲಜ್ಜ ರಾಜಕಾರಣಿಗಳು ಸಾಮಾಜಿಕ ಪರಿಸರವನ್ನೇ ಕುಲಗೆಡಿಸಿ ಬಿಟ್ಟಿದ್ದಾರೆ. ದೇಶದೆಲ್ಲೆಡೆಯಲ್ಲಿ ಒಂದು ವಿಧವಾದ ಅರಾಜಕತೆ ಮೂಡತೊಡಗಿದೆ. ಲಂಚಕೋರತನ ಅಡಿಯಿಂದ ಮುಡಿಯವರೆಗೆ ಹರಡತೊಡಗಿದೆ. ಸಮಾಜದಲ್ಲಿ ಶೀತಲಯುದ್ಧದ ವಾತಾವರಣ ಮೂಡಿದೆ. ಐಹಿಕ ಭೋಗ ಭಾಗ್ಯಗಳಿಗಾಗಿ ಮಾನವ ಏನೆಲ್ಲ ಮಾಡತೊಡಗಿದ್ದಾನೆ. ಭೌತಿಕಸಂಪತ್ತನ್ನು ಪಡೆಯುತ್ತಾ ಹೋಗುವುದೇ ಮಾನವನ ಪರಮಗಂತವ್ಯವಾಗಿ ಹೋಗಿದೆ. ನಿಸ್ವಾರ್ಥ ಮನೋಭಾವ ಮತ್ತು ತನ್ನ ನೆರೆಹೊರೆಯವರಿಗೆ ಸಹಾಯ ಮಾಡಬೇಕೆಂಬ ಬುದ್ಧಿ ಯುವ ಜನಾಂಗದಿಂದ ದೂರವಾಗುತ್ತಲಿದೆ. ದುಶ್ಚಟಗಳಾದ ಕುಡಿತ, ಮೋಜು, ಬೀಡಿ, ಚುಟ್ಟ, ಭಂಗಿಸೇದುವುದು ಇತ್ಯಾದಿಗಳ ದಾಸಾನುದಾಸರಾಗುತ್ತಿಲಿದ್ದಾರೆ. ಯುವಕರಲ್ಲಿ ವಿದ್ಯಾರ್ಥಿಗಳಲ್ಲಿ ಅಶಾಂತಿ, ಅಶಿಸ್ತು, ಅರಾಜಕತೆಗಳುಂಟಾಗುತ್ತಲಿವೆ. ಮೌಲ್ಯಗಳ ಬಗ್ಗೆ ಅಸಡ್ಡೆ ತಿರಸ್ಕಾರಗಳು ಯುವಕರಲ್ಲಿ ಕಂಡುಬರುತ್ತಲಿವೆ. ಯುವಜನಾಂಗದಲ್ಲಿ ಸೌಂದರ್ಯ ಪ್ರಜ್ಞೆಯಾಗಲೀ, ಸಾಹಿತ್ಯ ಮತ್ತು ಕಲೆಗಳಲ್ಲಿ ಆಸಕ್ತಿಯಾಗಲೀ ಇತ್ತೀಚಿನ ದಿನಗಳಲ್ಲಿ ಇಳಿಮುಖವಾಗುತ್ತಿರುವುದು ಕಂಡುಬರುತ್ತಿದೆ.

ಇಂದಿನ ಪರಿಸ್ಥಿತಿಯಲ್ಲಿ ನಮ್ಮ ದೃಷ್ಟಿಕೋನದಲ್ಲಿ ಬದಲಾವಣೆಗಳಾಗಿ ನಮ್ಮ ಜೀವನದ ಮೌಲ್ಯಗಳನ್ನು ಆ ದೃಷ್ಟಿಕೋನಕ್ಕೆ ತಕ್ಕಂತೆ ಹೊಂದಿಸಿಕೊಳ್ಳಬೇಕಾಗಿದೆ.

ಶಿಕ್ಷಣಸಂಸ್ಥೆ ಅದರ ವಿಶಾಲಾರ್ಥದಲ್ಲಿ ಒಂದು ಸಾಮಾಜಿಕಸಂಸ್ಥೆ. ಅದು ವ್ಯಕ್ತಿಯ ಪುರೋಭಿವೃದ್ಧಿಗೂ ಇರುವಂತಹುದು. ಸಮಾಜ ಕ್ರೋಢೀಕರಿಸಿಕೊಂಡು ಪೋಷಿಸಿ ಬೆಳೆಸಿಕೊಂಡು ಬರುತ್ತಿರುವ ಮೌಲ್ಯಗಳನ್ನು ಉಳಿಸಿಕೊಂಡು ಬೆಳೆಸಿಕೊಂಡು ಹೋಗಬೇಕಾದುದು ಶಿಕ್ಷಣಸಂಸ್ಥೆಗಳ ಜವಾಬ್ದಾರಿಯಾಗಿದೆ.

## ಮೌಲ್ಯಶಿಕ್ಷಣದ ಅರ್ಥ

ಕಲಿವವರಲ್ಲಿ ಒಳ್ಳೆಯ ಪ್ರವೃತ್ತಿಗಳನ್ನು, ಒಳ್ಳೆಯ ಭಾವನೆಗಳನ್ನು ಮತ್ತು ಒಳ್ಳೆಯ ಮೌಲ್ಯಗಳನ್ನು ಯೋಜಿತ ರೀತಿಯಲ್ಲಿ ಬೆಳೆಸಬೇಕೆಂಬುದೇ ಮೌಲ್ಯಶಿಕ್ಷಣದ ಅರ್ಥ.

ಮೌಲ್ಯಶಿಕ್ಷಣವು ಸಮಾಜಶಿಕ್ಷಣ ಮತ್ತು ಮೌಲ್ಯಗಳೊಂದಿಗೆ ಸಾಮಾನ್ಯ ಸಂಬಂಧವುಳ್ಳದಾಗಿರಬೇಕು. ಮೌಲ್ಯಶಿಕ್ಷಣದ ಉದ್ದೇಶಗಳು ಮತ್ತು ಅವುಗಳನ್ನು ಈಡೇರಿಸಲು ಶೈಕ್ಷಣಿಕ ಸಂಸ್ಥೆಗಳಲ್ಲಿ ಮತ್ತು ತರಬೇತಿ ಸಂಸ್ಥೆಗಳಲ್ಲಿ ಇರುವ ವ್ಯವಸ್ಥೆ, ಮೌಲ್ಯಶಿಕ್ಷಣದ ವಸ್ತು ಮತ್ತು ಸಾರಾಂಶ (ಅಂದರೆ ಕಲಿಯುವವರಿಗೆ ವರ್ಗಾವಣೆ ಮಾಡಬೇಕಾಗಿರುವ ವಾಸ್ತವಿಕ ಮೌಲ್ಯಗಳು) ಮೌಲ್ಯಗಳು ಒದಗಿಸುವ ಸಂಪನ್ಮೂಲಗಳು ವಿಧಾನಗಳು ಮೌಲ್ಯದ ಬೆಳವಣಿಗೆಯ ಗುರಿ ಮತ್ತು ಮೌಲ್ಯಶಿಕ್ಷಣ ನೀಡುವ ಶಿಕ್ಷಕ - ಇವೆಲ್ಲವೂ ಮುಖ್ಯ.

## ಮೌಲ್ಯಶಿಕ್ಷಣವು ಶಿಕ್ಷಣದ ಒಂದು ವಿಧಾನ

ಕಲಿಯುವವರಿಗೆ ಮೌಲ್ಯಗಳನ್ನು ನೇರವಾಗಿ ಇಂಜೆಕ್ಟ್ ಮಾಡಲು ಬರುವುದಿಲ್ಲ. ಬಲವಂತವಾಗಿ ಅವುಗಳನ್ನು ಕಲಿಯುವವರ ಮನಸ್ಸಿನಲ್ಲಿ ತುರುಕಲು ಬರುವುದಿಲ್ಲ. ಅದಕ್ಕೆ ಬದಲಾಗಿ ಮೌಲ್ಯಶಿಕ್ಷಣವು ಕಲಿಯುವವರನ್ನು ಸ್ವತಂತ್ರವಾಗಿ ಆಲೋಚಿಸುವಂತೆ ಮಾಡಿ ಅವರು ಭಾವನಾತ್ಮಕವಾಗಿ ಮೌಲ್ಯಗಳ ಪರಿಕಲ್ಪನೆಯನ್ನು ಬೆಳೆಸಿಕೊಳ್ಳುವಂತೆ ಮಾಡಬೇಕು. ಅವರು ಸ್ವತಂತ್ರವಾಗಿ ಮತ್ತು ವಿಮರ್ಶಾತ್ಮಕವಾಗಿ ಆಲೋಚಿಸಲು ಸಹಾಯ ನೀಡಬೇಕು. ಜವಾ

ಬ್ದಾರಿಯುತವಾಗಿ ಮಕ್ಕಳು ಕಾರ್ಯವೆಸಗುವಂತೆ ಮಾಡಬೇಕು. ಮೌಲ್ಯಶಿಕ್ಷಣದ ಮುಖ್ಯವಾದ ಆತ್ಮಾವಲೋಕನ. ಮೌಲ್ಯವೊಂದಕ್ಕೆ ಕುರುಡು ನಂಬಿಕೆಯಿಂದ ಅಂಟಕೊಳ್ಳುವುದು ಮತ್ತು ಅಧಿಕಾರಕ್ಕೆ ಹೆದರಿಕೊಂಡು ಕೆಲವು ಸಂಪ್ರದಾಯಗಳನ್ನು ಅನುಸರಿಸುವುದು ಉತ್ತಮ ಮೌಲ್ಯದ ಲಕ್ಷಣಗಳಲ್ಲ. ಆದರೆ ಅನಂತರ ಆ ಎಲ್ಲ ಮೌಲ್ಯಗಳ ಬಗ್ಗೆ ಸ್ವಯಂ ವಿಮರ್ಶಿಸುವ ಬೆಲೆಕಟ್ಟುವ ಅರಿವಿನ ಪರಿಧಿಯಲ್ಲಿಟ್ಟು ತುಲನಾತ್ಮಕವಾಗಿ ನೋಡುವ ಕಲೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದೇ ಮೌಲ್ಯಶಿಕ್ಷಣದ ಗುರಿ.

### ಶಾಲೆಗಳಲ್ಲಿ ಮೌಲ್ಯಶಿಕ್ಷಣದ ವ್ಯಾಪ್ತಿ

ಸಾಮಾಜಿಕ ಸನ್ನಿವೇಶಕ್ಕೆ ಅನುಗುಣವಾಗಿ ಭಾರತೀಯ ಶಾಲಾವ್ಯವಸ್ಥೆ ಇರಬೇಕು. ಶಾಲಾಜೀವನ ಮೌಲ್ಯಗಳ ತರಬೇತಿಗೆ ಉತ್ತಮ ಭೂಮಿಕೆಯನ್ನೊದಗಿಸುತ್ತದೆ. ಮೌಲ್ಯಗಳ ಬೆಳವಣಿಗೆಯಲ್ಲಿ ಶಾಲೆ ಒಂದು ಏಜೆಂಟ್ ಆಗಿ ಕೆಲಸ ಮಾಡುತ್ತದೆ. ಆದ್ದರಿಂದ ಶಾಲೆ ಮತ್ತು ಉಪಾಧ್ಯಾಯರು ಒಳ್ಳೆಯ ಮೌಲ್ಯಗಳನ್ನು ಬೆಳೆಸಬಲ್ಲವರಾಗಿದ್ದಾರೆ ಎಂಬುದರಲ್ಲಿ ಗಾಢವಾದ ನಂಬಿಕೆಯನ್ನಿಟ್ಟು ಕೊಂಡಿರುವಂತಹುದಾಗಿದೆ. ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ಶಾಲೆ ಅಂತಹ ಗುರುತರ ಜವಾಬ್ದಾರಿಯನ್ನು ಹೊರುವುದು ತುಂಬ ಕಷ್ಟಕರವಾದ ವಿಚಾರ. ಏಕೆಂದರೆ ಹಳೆಯ ಮೌಲ್ಯಗಳು ಶಿಕ್ಷಣವನ್ನು ಹೊಸ ಮೌಲ್ಯಗಳೊಂದಿಗೆ ಹೊಂದಾಣಿಕೆ ಮಾಡಲಾರವು. ಶಾಲೆಗಳು ಎಷ್ಟು ಪರಿಣಾಮಕಾರಿಯಾಗಿ ಮೌಲ್ಯಶಿಕ್ಷಣವನ್ನೊದಗಿಸಬಲ್ಲವು ಮತ್ತು ಅದರ ಸ್ವಭಾವ ಮತ್ತು ವ್ಯಾಪ್ತಿ ಎಷ್ಟು ಎಂಬುದನ್ನು ಅರಿಯಬೇಕು. ಮೌಲ್ಯಶಿಕ್ಷಣವು ಅದರ ಸಂಪೂರ್ಣಾರ್ಥದಲ್ಲಿ ಯುಕ್ತ ವಾದ ಪ್ರಜ್ಞೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು. ಅವುಗಳೆಂದರೆ ನೈತಿಕ, ಸೌಂದರ್ಯೋಪಾಸಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳನ್ನು ಬೆಳೆಸಿಕೊಂಡು ನ್ಯಾಯಸಮ್ಮತಿ ಉಳ್ಳ ಮೌಲ್ಯಯುಕ್ತ ತೀರ್ಮಾನಗಳನ್ನು ಕೈಗೊಳ್ಳಲು ನೆರವಾಗುವುದು. ಸ್ಪರ್ಧಾತ್ಮಕ ಮೌಲ್ಯಗಳಲ್ಲಿ ಆಯ್ಕೆಮಾಡಿಕೊಂಡ ಮೌಲ್ಯಗಳನ್ನು ಅಂತರ್ಗತಗೊಳಿಸುವುದು ಮತ್ತು ಅವುಗಳನ್ನು ಜೀವನಾನುಷ್ಠಾನ ದಲ್ಲಿಟ್ಟು ಕೊಳ್ಳುವುದು. ಮೌಲ್ಯಗಳ ಕಲಿವಿನ ಸಂಪೂರ್ಣ ಚಿತ್ರ ಕಲಿಕೆಯ ಸಾಮ್ರಾಜ್ಯವನ್ನೇ ಆವರಿಸಿಕೊಂಡು ಬಿಡುತ್ತದೆ.

### ಮೌಲ್ಯ ಶಿಕ್ಷಣದ ಉದ್ದೇಶಗಳು

೧. ಮಕ್ಕಳ ನೈತಿಕ ಮತ್ತು ಸೌಂದರ್ಯೋಪಾಸಕ ಪ್ರಜ್ಞೇಂದ್ರಿಯ ಗಳನ್ನು ಜಾಗೃತಗೊಳಿಸುವುದು.

೨. ಆಧುನಿಕಜೀವನಕ್ಕೆ ಸಂಬಂಧಿಸಿದ ಪ್ರಮುಖವಾದ ನೀತಿಯುತ ದೃಶ್ಯಗಳಿಗೆ ಸಂಬಂಧಿಸಿದ ಬಡತನ, ಅನಕ್ಷರತೆ, ಮಾನವ ಹಕ್ಕುಗಳು, ಪರಿಸರ, ಜನಸಂಖ್ಯೆಯ ಹೆಚ್ಚಳ ಮತ್ತು ಶಾಂತಿ ಇತ್ಯಾದಿ ವಿಷಗಳನ್ನು ಶೀಘ್ರವಾಗಿ ಗ್ರಹಿಸಿ ಅವುಗಳ ಬಗೆಗಿನ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವಂತೆ ಮಾಡುವುದು.

೩. ಜೀವನದಲ್ಲಿ ನಿತ್ಯವೂ ಘಟಿಸುವ ಸಾಮಾಜಿಕ ಘಟನೆಗಳಿಗೆ ಮತ್ತು ವೃತ್ತಾಂತ ಅಥವಾ ಸಂಗತಿಗಳಿಗೆ ನೀತಿಯುತ ವ್ಯಾಪ್ತಿಯಲ್ಲಿ ತೆರೆದ ಮನಸ್ಸಿನಿಂದ ಸ್ಪಂದಿಸುವ ಸಾಮರ್ಥ್ಯವನ್ನು ಬೆಳೆಸುವುದು.

೪. ಪ್ರಜಾಪ್ರಭುತ್ವ, ಜಾತ್ಯಾತಿತತೆ, ಸಾಮಾಜಿಕ ನ್ಯಾಯ, ವೈಜ್ಞಾನಿಕ ದೃಷ್ಟಿಕೋನ ಮತ್ತಿತರ ಸಾಮಾಜಿಕ ಬೆಸುಗೆಗೆ ಮತ್ತು ರಾಷ್ಟ್ರದ ಐಕ್ಯತೆಗೆ ಸಹಾಯಕವಾಗುವ ಮೌಲ್ಯಗಳ ಬಗ್ಗೆ ತಿಳುವಳಿಕೆ ಕೊಟ್ಟು ಅವುಗಳನ್ನು ಮೆಚ್ಚುವಂತೆ ಮಾಡುವುದು. ಮತ್ತು ಈ ಎಲ್ಲ ಮೌಲ್ಯಗಳಿಗೆ ಬದ್ಧರಾಗಿ ನಡೆದುಕೊಳ್ಳುವ ಸಂಕಲ್ಪವನ್ನು ಕೈಗೊಳ್ಳುವಂತೆ ಮಾಡುವುದು.

೫. ವಿದ್ಯಾರ್ಥಿಗಳು ಅಂತಹ ಮೌಲ್ಯಗಳಿಗೆ ಬದ್ಧರಾಗಿ ನಡೆದು ಕೊಳ್ಳುವಂತಹ ಸುವರ್ಣಾವಕಾಶಗಳನ್ನು ಕಲ್ಪಿಸಿಕೊಟ್ಟು ಅವರು ಅವುಗಳನ್ನು ಅನುಷ್ಠಾನಕ್ಕೆ ತಂದುಕೊಳ್ಳಲು ಸಹಾಯಕ ವಾಗುವಂತೆ ಮಾಡುವುದು.

### ಮೌಲ್ಯ ಶಿಕ್ಷಣದ ಪಠ್ಯವಿಷಯ

ಮೌಲ್ಯಶಿಕ್ಷಣವನ್ನು ನೀಡಲು ಯಾವ ಪಠ್ಯವಿಷಯ ವಸ್ತುಬೋಧನೆಗೆ ಅಥವಾ ವರ್ಗಾವಣೆಗೆ ಅಳವಟ್ಟಿರಬೇಕು ಎಂಬುದನ್ನು ಎರಡು ದೃಷ್ಟಿಕೋನಗಳಿಂದ ನಿರ್ಧರಿಸಬೇಕಾಗಿದೆ. ಒಂದು ವೈಯಕ್ತಿಕ ದೃಷ್ಟಿಕೋನ, ಇನ್ನೊಂದು ಸಾಮಾಜಿಕ ದೃಷ್ಟಿಕೋನ. ವ್ಯಕ್ತಿಯೊಬ್ಬನನ್ನು ಕೇಂದ್ರವಾಗಿಟ್ಟುಕೊಂಡು ಅವನ ಸುತ್ತ ಎಲ್ಲ ಮೌಲ್ಯಗಳನ್ನು ಪ್ರಸಾದನಗೊಳಿಸಿ ಅವನನ್ನು ಒಳ್ಳೆಯ ಮನುಷ್ಯ ಎನ್ನುವಂತೆ ಮಾಡತಕ್ಕದ್ದು.

ಈ ದೃಷ್ಟಿಕೋನದ ಬೆಳಕಿನಲ್ಲಿ ಸಾರ್ವತ್ರಿಕ ಶಿಕ್ಷಣದ ಮೂಲಕ ವಾಸ್ತವಿಕ ಮೌಲ್ಯಗಳಾದ ಪ್ರಜಾಪ್ರಭುತ್ವ, ಜಾತ್ಯಾತೀತತೆ, ಸಮಾಜವಾದ, ಸಮಾನತೆ, ಭ್ರಾತೃತ್ವ, ವಿಶ್ವಸಹಕಾರ ಎಂಬ ಮೌಲ್ಯಗಳ ಅಂಗೀಕಾರ ಮತ್ತು ಅನುಷ್ಠಾನ ಹಾಗೂ ಜಾತ್ಯಾತೀತ ತೆಯ ಕಟ್ಟುಕಟ್ಟಳೆಗಳನ್ನು ಕಡಿದೊಗೆದು ಸಾಂಸ್ಕೃತಿಕ ಭಿನ್ನತೆಯನ್ನು ದೂರಮಾಡಿ ಪರಸ್ಪರ ಹೊಂದಾಣಿಕೆಯಿಂದ ಜೀವನ ನಡೆಸಲು ವಿದ್ಯಾರ್ಥಿಗಳನ್ನು ಅಣಿಗೊಳಿಸಬೇಕು.

### ಮೌಲ್ಯಶಿಕ್ಷಣದ ಸಂಪನ್ಮೂಲಗಳು ಮತ್ತು ವಿಧಾನಗಳು ಹಾಗೂ ಶಿಕ್ಷಕರ ಪಾತ್ರ

ಮೌಲ್ಯಶಿಕ್ಷಣವೆನ್ನುವುದು ಚರಿತ್ರೆ, ಭೂಗೋಳ, ಗಣಿತ, ಸಮಾಜಶಾಸ್ತ್ರ ಇತ್ಯಾದಿ ವಿಷಯಗಳನ್ನು ವಿದ್ಯುಕ್ತವಾಗಿ ಬೋಧಿಸಿದ ಹಾಗೆ ಬೋಧಿಸಬಹುದಾದ ಒಂದು ವಿಷಯವಲ್ಲ. ಮೌಲ್ಯಶಿಕ್ಷಣವೆನ್ನುವುದು ಬೋಧನೆಯ ಎಲ್ಲ ವಿಷಯಗಳಲ್ಲೂ ಹಾಸುಹೊಕ್ಕಾಗಿರುವಂತಹುದು. ಕೊಡುವ ಶಿಕ್ಷಣವೆಲ್ಲವೂ ಮೌಲ್ಯಯುತ ಶಿಕ್ಷಣವೇ ಆಗಿದೆ. ನಾವು ಮೌಲ್ಯಶಿಕ್ಷಣಕ್ಕೂ ಮತ್ತು ಸಾಮಾನ್ಯ ಶಿಕ್ಷಣಕ್ಕೂ ಬೆಸುಗೆ ಹಾಕಿದಾಗ ಮೌಲ್ಯಶಿಕ್ಷಣದ ಸಂಪನ್ಮೂಲಗಳನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಪಠ್ಯವಿಷಯಗಳು, ಉಪಾಧ್ಯಾಯರುಗಳು ಮತ್ತು ಒಟ್ಟಾರೆಯಾಗಿ ಶಾಲಾಪರಿಸರ ಒದಗಿಸಿಕೊಡಬಹುದಾದ ಸನ್ನಿವೇಶ ಹಾಗೂ ಅಂತರ್ಗತ ಪಠ್ಯಕ್ರಮ ಇವೇ ಮೌಲ್ಯಶಿಕ್ಷಣದ ಸಂಪನ್ಮೂಲ





ಗಳೆನಿಸುತ್ತವೆ. ಈ ಎಲ್ಲಾ ಸಂಪನ್ಮೂಲಗಳನ್ನು ವಿದ್ಯಾರ್ಥಿಗಳಿಗೆ ಮೌಲ್ಯ ಶಿಕ್ಷಣ ನೀಡುವಲ್ಲಿ ವಿವೇಚನಾಯುಕ್ತವಾಗಿ ಚತುರತೆಯಿಂದ ದುಡಿಸಿಕೊಳ್ಳಬೇಕಾಗಿದೆ.

### ಸಾರಾಂಶ

ಮೇಲಿನ ಎಲ್ಲ ಅಂಶಗಳನ್ನು ಕ್ರೋಢೀಕರಿಸಿ ಮೌಲ್ಯ ಶಿಕ್ಷಣದ ಕಲ್ಪನೆಯನ್ನು ಕೆಳಕಂಡಂತೆ ಸಂಕ್ಷೇಪಿಸಿಡಲಾಗಿದೆ:

೧. ಎಲ್ಲ ಶಿಕ್ಷಣವೂ ನೀತಿ ಶಿಕ್ಷಣವೆ. ಯಾವುದನ್ನು ನೀತಿಶಿಕ್ಷಣ ವೆಂದು ಪರಿಗಣಿಸುತ್ತೇವೆಯೋ ಅದೆಲ್ಲವೂ ಮೌಲ್ಯಶಿಕ್ಷಣವೆ. ಅವುಗಳ ವಿವರಣೆ ಮತ್ತು ವ್ಯಾಖ್ಯಾನಗಳ ದೃಷ್ಟಿಯಿಂದ ಆದಾಗ್ಯೂ ವಿದ್ಯುಕ್ತವಾಗಿ ಮೌಲ್ಯಶಿಕ್ಷಣವನ್ನು ಬೋಧಿಸಲೇ ಬೇಕೆಂಬ ಉದ್ದೇಶ ಮೂಡಿದ್ದು. ಏಕೆಂದರೆ ಸಮಾಜದಲ್ಲಿ ಬೆಳೆಯುತ್ತಿರುವ ಮೌಲ್ಯಕ್ಷೋಭೆ. ಆದ ಕಾರಣ ಮೌಲ್ಯಶಿಕ್ಷಣದ ಬೆಳವಣಿಗೆಯು ಉತ್ಕಟಾಂಕ್ಷೆ ಮೂಡಿಸಿರು ವಂತಹುದಾಗಿದೆ. ಸಮಾಜ ಜೀವನದಲ್ಲಿ ಕಂಡಬರುತ್ತಿರುವ ನೈತಿಕ ಅಧಃಪತನವೇ ಮೌಲ್ಯಶಿಕ್ಷಣದ ಅವಶ್ಯಕತೆಯನ್ನು ಎತ್ತಿ ಹೇಳುತ್ತಿರು ವಂತಹುದಾಗಿದೆ.

೨. ಮೌಲ್ಯಶಿಕ್ಷಣವು ಒಂದು ಯೋಜಿತ ಶೈಕ್ಷಣಿಕ ಕಾರ್ಯಕ್ರಮ ವಾಗಿದ್ದು ವಿದ್ಯಾರ್ಥಿಗಳಲ್ಲಿ ಸನ್ನಡತೆ ಸದ್ಗುಣಗಳ ಮೌಲ್ಯಗಳನ್ನು ಬೆಳೆಸುವಂತಹುದಾಗಿದೆ.

೩. ಮೌಲ್ಯಶಿಕ್ಷಣವು ಒಂದು ಶೈಕ್ಷಣಿಕ ವಿಧಾನ. ಆದ್ದರಿಂದ ಅದು ವಿದ್ಯಾರ್ಥಿಗಳಲ್ಲಿ ವಿಮರ್ಶಾತ್ಮಕ ಆಲೋಚನೆ. ಚಿಂತನಮಂಥನ ದಿಂದ ಉಂಟಾಗುವ ವಿವೇಚನೆ ಅದು 'ಇದನ್ನು ಮಾಡು' ಮತ್ತು 'ಇದನ್ನು ಮಾಡಬೇಡ' ಎಂದು ಅಧಿಕಾರವಾಣಿಯಿಂದ ಹೇಳುವಂತಹುದಲ್ಲ.

೪. ಮೌಲ್ಯಶಿಕ್ಷಣವು ನೈತಿಕ ಮತ್ತು ಸೌಂದರ್ಯೋಪಾಸಕ ವಸ್ತು ವಿನ್ಯಾಸಗಳನ್ನು ಶೀಘ್ರವಾಗಿ ಗ್ರಹಿಸುವ ಎಚ್ಚರಿಕೆಯನ್ನು ಒಳಗೊಂಡುದಾಗಿದೆ ಮತ್ತು ಭಾವನಾತ್ಮಕವಾದ ಶಿಕ್ಷಣ ಮತ್ತು ಇಚ್ಛಾಶಕ್ತಿ ಹಾಗೂ ಸದ್ಗುಣಗಳ ಬೆಳವಣಿಗೆಯನ್ನು ಒಳಗೊಂಡಿದೆ. ಅದು ಸಮಗ್ರ ವ್ಯಕ್ತಿತ್ವವನ್ನು ಬೆಳೆಸುವುದಕ್ಕೆ ಸಂಬಂಧಿಸಿದುದಾಗಿದೆ.

೫. ಪಠ್ಯಕ್ರಮ, ಉಪಪಠ್ಯಕ್ರಮ, ಅಗೋಚರ ಪಠ್ಯಕ್ರಮ. ಶಾಲೆಯ ವಾತಾವರಣ ಮತ್ತು ಉಪಾಧ್ಯಾಯ ಇವೆಲ್ಲವೂ ಮೌಲ್ಯಶಿಕ್ಷಣ ವನ್ನು ನೀಡಲಿಕ್ಕಾಗಿಯೆ ಮೌಲ್ಯಶಿಕ್ಷಣದ ಪಠ್ಯವಿಷಯವೊಂದು ಇರಬೇಕಾದ ಅವಶ್ಯಕತೆ ಇಲ್ಲ. ಮೌಲ್ಯ ಶಿಕ್ಷಣವನ್ನು ಇರುವ ಪಠ್ಯಕ್ರಮದೊಂದಿಗೆ ಹೆಚ್ಚು ಪರಿಣಾಮಕಾರಿಯಾಗಿ ನೀಡ ಬಹುದು. ಮೌಲ್ಯಗಳನ್ನು ಶಿಕ್ಷಣದೊಂದಿಗೆ ಸಮಗ್ರಗೊಳಿಸ ಬಹುದು; ಸೇರ್ಪಡೆ ಮಾಡಬಹುದು ಮತ್ತು ಶ್ರೀಮಂತ ಗೊಳಿಸಲೂಬಹುದು.

೬. ಮೌಲ್ಯಶಿಕ್ಷಣದ ವ್ಯಾಪ್ತಿಯು ಶಾಲಾಶಿಕ್ಷಣದ ಪರಿಧಿಗಷ್ಟೇ ಸೀಮಿತವಾದುದಲ್ಲ. ಅದು ಶಾಲೆಯ ಹೊರಗಿನ ಇನ್ನಿತರ ಮಾಧ್ಯಮಗಳಾದ ಸಿನಿಮಾ, ದೂರದರ್ಶನ, ರೇಡಿಯೋ, ಓರಗೆಯ ಹುಡುಗರು, ಕುಟುಂಬ, ಸಾಮಾಜಿಕ ಸನ್ನಿವೇಶಗಳ ಪ್ರಭಾವ - ಇತ್ಯಾದಿಗಳಿಂದ ನಿರ್ಧರಿಸುವಂತಹುದು. ಶಾಲೆಗಳಲ್ಲಿ ಮೌಲ್ಯಶಿಕ್ಷಣದ ಪ್ರಮುಖ ಉದ್ದೇಶಗಳೆಂದರೆ ಯುಕ್ತ, ನೈತಿಕ, ಸೌಂದರ್ಯೋಪಾಸಕ ಮತ್ತು ಸಾಂಸ್ಕೃತಿಕ ಸೂಕ್ಷ್ಮಮನಸ್ಸಿನ ಸೂಕ್ಷ್ಮಗ್ರಾಹಿತ್ವವನ್ನು ಹೆಚ್ಚಿಸುವುದು ಮತ್ತು ವಿದ್ಯಾರ್ಥಿಗಳು ತೆರೆದ ಮನಸ್ಸಿನಿಂದ ಪ್ರಚಲಿತ ಸಮಸ್ಯೆಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ನಿರ್ಭೀತ ಮನಸ್ಸಿನಿಂದ ತಿಳಿಸುವ ಸಾಮರ್ಥ್ಯವನ್ನುಂಟುಮಾಡುವುದು ಹಾಗೂ ಯುಕ್ತ ಮೌಲ್ಯಗಳಿಗೆ ಕಟಿಬದ್ಧರಾಗಿ ಜೀವನ ಸಾಗಿಸುವಂತೆ ಮಾಡುವುದು.

೭. ಶಾಲೆಗಳು ವರ್ಗಾವಣೆ ಮಾಡಬೇಕಾಗಿರುವ ನಿರ್ದಿಷ್ಟ ಮೌಲ್ಯಗಳು ವಿಶ್ವದೃಷ್ಟಿಕೋನದಿಂದ ಪಡೆದುಕೊಂಡವುಗಳು ಮತ್ತು ಸಮಕಾಲೀನ ಸಮಾಜ ಮತ್ತು ರಾಷ್ಟ್ರೀಯ ದೃಷ್ಟಿಕೋನ ಗಳಿಗೆ ಸಂಬಂಧಿಸಿದವುಗಳು. ಈ ರೀತಿಯ ಮೌಲ್ಯಗಳಿಗೆ ಉದಾಹರಣೆಗಳೆಂದರೆ ಪ್ರಜಾಪ್ರಭುತ್ವ, ಸಾಮಾಜಿಕ ನ್ಯಾಯ, ಸಾಮಾಜಿಕ ಬೆಸುಗೆ ಮತ್ತು ರಾಷ್ಟ್ರೀಯ ಐಕ್ಯತೆ, ವೈಜ್ಞಾನಿಕ ದೃಷ್ಟಿ, ನಮ್ಮ ಸಾಂಸ್ಕೃತಿಕ ಪರಂಪರೆ, ಸ್ತ್ರೀಪುರುಷ ಸಮಾನತೆ, ಪರಿಸರ ಶುದ್ಧತೆಯನ್ನು ಕಾಪಾಡುವಿಕೆ, ಜನಸಂಖ್ಯಾ ನಿಯಂತ್ರಣ ಜೀವನದ ಗುಣಮಟ್ಟ ಮತ್ತು ಶಾಂತಿ.

ಮೌಲ್ಯಶಿಕ್ಷಣದ ಸಮಗ್ರ ಸ್ವಭಾವವನ್ನು ಗಮನದಲ್ಲಿಟ್ಟು ಕೊಂಡು ಮೌಲ್ಯಶಿಕ್ಷಣವು ವ್ಯಾಪಕವಾದ ವಿಧಾನಗಳನ್ನು ಮತ್ತು ವ್ಯೂಹರಚನೆಯನ್ನು ಹೊಂದಿದ್ದು ತನ್ಮೂಲಕ ಜ್ಞಾನಸಂಪಾದನೆ, ಭಾವನೆಗಳ ಮತ್ತು ಉದ್ದೇಶಗಳ ಬೆಳವಣಿಗೆ, ಇಚ್ಛಾಶಕ್ತಿಯ ತರಬೇತಿ ಮತ್ತು ಕಲಿಯುವವರ ಗುಣಮಟ್ಟವನ್ನು ಹೆಚ್ಚಿಸುವುದು ಇತ್ಯಾದಿ ಗಳನ್ನು ಒಳಗೊಂಡಿದ್ದು ಈ ಕೆಳಕಂಡ ಅಂಶಗಳಿಂದ ಕೂಡಿದೆ.

(ಅ) ಮೌಲ್ಯಗಳ ಸಂದಿಗ್ಧತೆ ಮತ್ತು ಮೌಲ್ಯಗಳನ್ನು ವಿಷದೀ ಕರಿಸುವುದು.

(ಆ) ದೃಶ್ಯ ಮತ್ತು ವಿವಿಧ ಪ್ರಜ್ಞೇಂದ್ರಿಯಗಳ ಅನುಭವಕ್ಕೊಳ ಪಡುವಂತೆ ಮಾಡುವುದು.

(ಇ) ಓದುವುದು, ಕೇಳುವುದು ಮತ್ತು ಚರ್ಚಿಸುವುದು ಇತ್ಯಾದಿ ಚಟುವಟಿಕೆಗಳು

(ಈ) ಅಭಿನಯ, ಆದರ್ಶಪಾತ್ರ, ನಿರ್ವಹಣೆ ಮುಂತಾದ ಚಟುವಟಿಕೆಗಳು.

(ಉ) ಜೀವನದಲ್ಲಿ ಅನುಷ್ಠಾನಯೋಗ್ಯವಾದ ಚಟುವಟಿಕೆಗಳು.

ಮೌಲ್ಯಶಿಕ್ಷಣವು ಇತರ ಪಠ್ಯ, ಉಪಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳಿಂದ ಬೇರ್ಪಟ್ಟುದಲ್ಲ. ಉಪಾಧ್ಯಾಯನ ವ್ಯಕ್ತಿಚಟು ವಟಿಕೆಗಳೊಂದಿಗೆ ಅದು ಬೆರೆತು ಹೋಗಿರುವ ಅಥವಾ ಹೊಯ್‌ಕೈಯ್ಯಾಗಿ ಹೊಂದಿಕೊಂಡಿರುವಂತಹುದು. ಪ್ರತಿಯೊಬ್ಬ ಶಿಕ್ಷಕನೂ ಒಬ್ಬ ಮೌಲ್ಯಶಿಕ್ಷಕನೇ ಆಗಿರುತ್ತಾನೆ. ❑

# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)



- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

"ನೀನು ಸೇವಕಿಯರ ಮೋಹಿಸಿದ್ದೀಯಾ, ಭೂಲೋಕದಲ್ಲಿ ಹುಟ್ಟಿ ಸಂಸಾರ ಮಾಡಿ, ಆಮೇಲೆ ಬಂದು ಗಣಪದವಿ ಹೊಂದು" ಎನ್ನಲು ಭೂಲೋಕದಲ್ಲಿ ಜಡೆಯ ನೈನಾರು ಯಸ್ಯಜ್ಞಾನದೇವಿಯರ ಗರ್ಭದಲ್ಲಿ ಜನಿಸಿದ. ಆಮೇಲೆ ಆತನನ್ನು ನರಸಿಂಹ ಮೊನೆರು ದತ್ತು ತೆಗೆದುಕೊಂಡರು. ಯೌವನ ಬರಲು ಆತನಿಗೆ ಯುವರಾಜ ಪಟ್ಟವನ್ನು ಕಟ್ಟಲಾಯಿತು. ಆತನಿಗೆ ಮದುವೆ ಮಾಡಬೇಕೆಂದು ರಾಜ ಮಂತ್ರಿಗೆ ಹೇಳಿದ. ಆತ ತಿರಿಯೆಂದಪುರಕ್ಕೆ ಬಂದು ಅಲ್ಲಿ ರತ್ನಮಾಲೆ ಎಂಬ ಕನ್ಯೆಯನ್ನು ಗೊತ್ತುಪಡಿಸಿದ. ಆತನು ಈ ಪಾಶಕ್ಕೆ ಬೀಳದಂತೆ ಮಾಡಲು ಶಿವನು ವೃದ್ಧ ತಪಸ್ವೀ ವೇಷದಲ್ಲಿ ವಿವಾಹ ಮಂಟಪಕ್ಕೆ ಬಂದು ಓಂ ನಮಃ ಶಿವಾಯ ಎನ್ನುತ್ತಾ ಕೆಮ್ಮುತ್ತಾ ಬರುತ್ತಿರಲು ಜನರು, "ಆತನನ್ನು ಆಚೆ ತಳ್ಳಿರಿ" ಎಂದರು.

ಇವನು ನರಸಿಂಗಮೊನೆಯಾರರ ಮಗನಲ್ಲಾ, ಸಾಕಿದ ಮಗ, ಜಡೆನೈನಾರು ಯಸ್ಯಜ್ಞಾನದೇವಿಯರ ಹೊಟ್ಟೆಯಲ್ಲಿ ಹುಟ್ಟಿರುವನು. ಇವನ ಹೆಸರು ನಂಬಿ ಎಂದು ಪ್ರಮಾಣ ಪತ್ರವನ್ನು ಮುಂದಿಟ್ಟ. ಇವನು ತೊತ್ತಿನ ಮಗ" ಎಂದು ಪ್ರಲಾಪಿಸಿದ.

"ಇದಕ್ಕೂ ನನಗೂ ಯಾವ ಸಂಬಂಧವಿಲ್ಲ ತೊಲಗು" ಎಂದು ಹೊರ ಹಾಕಿದ. ಪತ್ರವನ್ನು ಹರಿದು ಹಾಕಿದ. "ನಂಬಿ ಈ ಪತ್ರ ಹರಿದರೆ ಮತ್ತೊಂದಿದೆ ನೋಡು" ಎನ್ನಲು, ಅದನ್ನೂ ಹರಿದು ಮುದುಕನನ್ನು ಕೊಲ್ಲುವೆನೆಂದು ಕೋಪಿಸಿಕೊಂಡು ಹೋದ. ದೇವಾಲಯಕ್ಕೆ ಹೋಗಿ ಅಲ್ಲಿ ಅದೃಶ್ಯನಾದ ವೃದ್ಧ. ಸೌಂದರನಂಬಿಗೆ ಆಶ್ಚರ್ಯವಾಯಿತು. ಕೂಡಲೇ ಪೂರ್ವಜನ್ಮದ ಸ್ಮೃತಿ ಉಂಟಾಯಿತು.

"ನನ್ನ ಅಪರಾಧವನ್ನು ಕ್ಷಮಿಸಿ" ಎಂದು ನಮಸ್ಕರಿಸಿದ.

"ನೀನು ದಿನವೂ ತಿರುಪಾಡುಗಳನ್ನು ಹಾಡು, ನಾನು ನಿತ್ಯವೂ ನಿನಗೆ ಪಡಿ ಹೊನ್ನುಗಳನ್ನು ಕೊಡುವೆ" ಎಂದು ತಾಳವಿತ್ತು ಅದೃಶ್ಯನಾದ. ನರಸಿಂಗ ಮೊನೆಯುರು ನಂಬಿಯನ್ನು ರತ್ನಪೀಠದಲ್ಲಿ ಕುಳ್ಳಿರಿಸಿ ಪಾದೋದಕ ಕೊಂಡು ಹೊಗಳಿದರು. ಜಡೆಯ ನೈನಾರರು ಯಸ್ಯಜ್ಞಾನದೇವಿಯರು ಪುತ್ರನನ್ನು ನೋಡಿ "ನಮಗಿಂತ ಪುಣ್ಯವಂತರಾರಿಲ್ಲ" ಎಂದು ಆನಂದ ಹೊಂದಿದರು.

ಶಿವನು ಪ್ರತಿನಿತ್ಯ ಪಡಿ ಹೊನ್ನನ್ನು ನಂಬಿಗೆ ಕೊಡುವನೆಂಬ ಸುದ್ದಿ ಎಲ್ಲೆಡೆ ಹರಡಿತು. ಅನೇಕರು ಆತನ ದರ್ಶನಕ್ಕೆ ಬರುತ್ತಿದ್ದರು. ಸೌಂದರನಂಬಿ ಪರವೆನಾಚಿಯೊಂದಿಗೆ ಸುಖಿಸುತ್ತಿರಲು ಮತ್ತೊಬ್ಬಳು ರುದ್ರ ಕನ್ಯೆ ಸಂಕಿಲನಾಚಿಯು ಈಶಾನಶೆಟ್ಟಿ ಶಿವದೇವಿಯರ ಗರ್ಭದಲ್ಲಿ ಉದಿಸಿ ಶಿವನಾಣತಿಯಂತೆ ಸೌಂದರ ನಂಬಿಯೊಡನೆ ಮದುವೆಯಾಗಿ ಸುಖಿಸಿದಳು.

ಚಾರಮ ಮತ್ತು ಕುರಂಬ ನಂದಿ ಧ್ವಜ ಸಮೇತನಾಗಿ ಕೈಲಾಸಕ್ಕೆ ಬಂದರು. ನಂದಿ ಮಹಾಕಾಳಿಯರು ಚಾರಮನನ್ನು ಒಳಗೆ ಬಿಡಲಿಲ್ಲ. ಸೌಂದರ ನಂಬಿ ಬಂದು ಈ ವಿಚಾರವನ್ನು ಶಿವನಿಗೆ ತಿಳಿಸಲು, ಶಿವನು ನಂದಿಯನ್ನು ಕರೆದು ಚಾರಮನಿಗೆ ಉಪದೇಶ ನೀಡಿ ಕರೆದುತಾ ಎಂದ. ಆಗಲೆಂದು ಆತ ಉಪದೇಶ ನೀಡಿ ಕರೆದುತಂದ. ಸೌಂದರನಂಬಿ ಪುಷ್ಪದತ್ತ ಗಣೇಶನಾಗಿ ಶಿವನ ಸನ್ನಿಧಿಯಲ್ಲಿ ಪ್ರಕಾಶಿಸಿದ.

ಮತ್ತೊಂದು ಕಥೆಯಲ್ಲಿ,

ವಾಲ್ಮೀಕಪುರದಲ್ಲಿ ಮಂಗಲನಾಚಿಗೆ ಕನಕಲತೆಯು ಪರವೆನಾಚಿಯೆಂಬ ಮಗಳಾಗಿ ಹುಟ್ಟಿದಳು. ಅವಳನ್ನು ವಂಶಾರಾಧ್ಯರು ನಂಬಿಗೆ ಅರ್ಪಿಸುವಂತೆ ಹೇಳಿದರು. ಸರ್ವಮಂಗಳೆಯ ಅಪ್ಪಣೆಯಂತೆ ಅವಳು ಗುಡಿಯಲ್ಲಿ ನರ್ತಿಸುವಾಗ ನಂಬಿ ಅವಳನ್ನು ಕಂಡು ಮೋಹಿಸಿದ. ಶಿವನು ಕುಂಟಣಿಯಾಗಿ ಹೋಗಿ ಮಂಗಲನಾಚಿಗೆ, ನಂದಿಗೆ ಮುಂಡಿಗೆಯ ಸಾವಿರ ಹೊನ್ನು ಕೊಟ್ಟು, ಪರವೆನಾಚಿಯನ್ನು ನಂಬಿಗೆ ಕೊಡಿಸಿದನು.

ನಂಬಿ ಪರವೆನಾಚಿಯೊಡನೆ ನೀರಾಟವಾಡುವಾಗಲೂ ಶಿವಧ್ಯಾನ ನಿರತನಾಗಿರುತ್ತಿದ್ದ. ಒಮ್ಮೆ ಇಬ್ಬರು ಏಕಾಂತದಲ್ಲಿರುವಾಗ ನಂಬಿಯು ಸ್ತನಶಂಕರ ಎಂದು ಸ್ತುತಿಸಿ ನಾಚಿಯ ಸ್ತನದಲ್ಲಿ ಶಿವನಿಂದ ಹೊನ್ನನ್ನು ಪಡೆದನು. ಪುಷ್ಪಗಳಲ್ಲಿ ಲಿಂಗವನ್ನು ಕಾಣುತ್ತಿದ್ದ.

ವಾಲ್ಮೀಕೇಶ್ವರನ ಜಾತ್ರೆಯಲ್ಲಿ ಮಹೇಶ್ವರರಿಗೆ ನೀಡಲು ಧಾನ್ಯ ಬೇಡಿದ ಮಂಗಳನಾಚಿಗೆ ನಂಬಿಯಣ್ಣನು ತಿರುಕೊಳಲೆಯಲ್ಲಿ ಒಕ್ಕಲಿಗ ರೂಪದಿಂದಿದ್ದ ಶಿವನನ್ನು ಬೇಡಿ ತಪಃಸಿದ್ಧಿ ಪಡೆದು ಭೂತಗಳ ಕೈಲಿ ಹೊರಿಸಿಕೊಂಡು ದಾನ ಮಾಡಿಸಿದನು.





ಒಮ್ಮೆ ಪರಿವೆನಾಚಿ ನಂಬಿಯ ಮುಂದಿದ್ದ ಹೂಗಳನ್ನು ನಿರ್ಮಾಲ್ಯವೆಂದಳು. ಆತನೋಡಿದ ಹೂಗಳು ಲಿಂಗಾರ್ಪಿತವಾಗುತ್ತಿದ್ದುವು. ದಾಸಿ ಇದನ್ನು ಪರೀಕ್ಷಿಸಲು ಹೋಗಲು ಆತನ ಬಳಿ ಇದ್ದ ಹೂವೆಲ್ಲಾ ಲಿಂಗಗಳಾಗಿದ್ದವು.

ನಂಬಿಯ ಮೈಮೇಲೆ ಅರಿಸಿನದ ಉಗುರ ಗಾಯಗಳನ್ನು ಕಂಡು ಚೇರಮರಾಯ ಆತನಿಗೆ ನಮಸ್ಕರಿಸದಿರಲು, ಶಿವ ಕನಸಿನಲ್ಲಿ ಕಾಣಿಸಿಕೊಂಡು ನಮಿಸುವಂತೆ ಅಪ್ಪಣೆ ಮಾಡಿದ. ಮರುದಿನ ನಂಬಿಯೊಡನೆ ಗಜ್ಜುಗವಾಡುವಾಗ ಸೋತು ಆತನ ಬುದ್ಧಿವಾಡದಂತೆ ಹೂಡಿದ ಗಜ್ಜುಗವನ್ನು ಮುಕ್ತಿಪೀಠದ ಲಿಂಗವೆಂದೂ, ಇಡುವ ಗಜ್ಜುಗವನ್ನು ಚೆಂಗಣಿಗಲೆ ಎಂದೂ ಭಾವಿಸಿ ಹಾಡಿದ ನಂಬಿಯಣ್ಣನ ಮಹಿಮೆಗೆ ಚೇರಮನು ಅಚ್ಚರಿಪಟ್ಟ.

ನಂಬಿಯ ಮನೆಯಲ್ಲಿ ಊಟ ಮಾಡುವಾಗ ಚೇರಮನ ಬಯಕೆಯನ್ನು ತೀರಿಸುವಂತೆ ನಂಬಿ ತಿರುಪಾಡುಗಳನ್ನು ಹಾಡಿ ಶಿವನನ್ನು ಕುಣಿಸಿದ.

ಜಲಪ್ರಳಯವಾಗಿ ಒಂದು ಊರು ಮಾತ್ರ ತೇಲುತ್ತಿತ್ತು. ದೇವತೆಗಳು ಯಾವ ಊರು ಎಂದಾಗ ಶಿವ ತಿರುವಾರು ಎಂದು ಹೆಸರಿಟ್ಟು ಅಲ್ಲೇ ನಂಬಿ ಶಿವನ ಪೂಜಿಸಿ ನವಲಕ್ಷಧನ ಪಡೆದ.

ನಂಬಿಯಣ್ಣ ತಿರುವತ್ತಿಯೂರಿನ ಸಂಕಿಲೆನಾಚಿಯಲ್ಲಿ ಅನುರಕ್ತನಾಗಿ ಬೇಡಲು ಶಿವನು ಜಂಗಮ ರೂಪಿನಿಂದ ಅವಳ ತಂದೆ ಈಶನ ಶೆಟ್ಟಿಯಿಂದ ಅವಳನ್ನು ನಂಬಿಗೆ ಕೊಡಿಸಿದ. ಅವಳೊಡನೆ ಸುಖದಿಂದಿದ್ದ ನಂಬಿಯಣ್ಣ ಪರವೆನಾಚಿಯನ್ನು ಮರೆತ. ಅವಳ ವಿರಹ ವ್ಯಥೆನೋಡಿದ ಶಿವ ಅವಳ ಮೈಗಂಪು ನಂಬಿಗೆ ತಟ್ಟುವಂತೆ ಮಾಡಲು ನಂಬಿ ಸಂಕೋಲೆಯನ್ನು ತೊರೆದು ಪರವೆನಾಚಿಯ ಬಳಿನಡೆದ. ದಾರಿಯಲ್ಲಿ ಕಣ್ಣುಗಳು ಇಂಗಿ ಹೋದವು. ಕಾಮಾಕ್ಷಿಯನ್ನು ಸ್ತುತಿಸಿ ಒಂದು ಕಣ್ಣನ್ನು, ತಿರುವಾರೂರಿನ ವಲ್ಮೀಕನಾಥನ ಭಜಿಸಿ ಮತ್ತೊಂದು ಕಣ್ಣನ್ನು ಪಡೆದ. ಶಿವನು ಕುಂಟಣಿ ವೇಷದಿಂದ ಬಂದು ಪರವೆ,ಸಂಕಲೆ ಇಬ್ಬರನ್ನೂ ನಂಬಿಯೊಡಗೂಡಿಸಿದ. ನಂಬಿ ವಲ್ಮೀಕನಾಥನನ್ನು ಬೇಡಲು ಆತನು ಜಂಗಮ ರೂಪಿನಿಂದ ಪ್ರತ್ಯಕ್ಷನಾಗಿ ರುದ್ರಾಕ್ಷಿಯ ಉಡುಗೆ ಕೊಟ್ಟು ಅದರ ಮಹಿಮೆ ತಿಳಿಸಿದ. ಒಮ್ಮೆ ತೋಮಾಸಿಮಾರನೆಂಬ ಭಕ್ತ ಬೇಡಲು ನಂಬಿಯು ಶಿವನನ್ನು ಆತನ ಯಾಗಕ್ಕೆ ಕಳುಹಿಸಿದ.

ನಂಬಿ ತುರುಮುರುಘಾಂಡಿ ಎಂಬ ಶಿವಕ್ಷೇತ್ರವನ್ನು ಗಮನಿಸದೆ ಹೋಗುತ್ತಿರಲು ಶಿವನು ಬೇಡನ ರೂಪದಿಂದ ಬಂದು ಚತುರಂಗ ಬಲವನ್ನೇ ಕೊಂಡುಹೋದ. ಆಗ ನಂಬಿ ಶಿವಲಿಂಗವನ್ನೂ ಹುಡುಕುತ್ತಿರಲು ಕೈಲಾಸಕ್ಕೆ ಬರುವಂತೆ ಓಲೆ ಬಂದಿತ್ತು. ತನ್ನ ಹೆಂಡತಿಯರನ್ನು ಕರೆದು ತರಲು ಮಂತ್ರಿಗೆ ಹೇಳಿ ನಂಬಿ ಕೈಲಾಸಕ್ಕೆ ಹೋದ.

ಪಕ್ಕದೂರಿನ ಸೌಂದರನಾಚಿಯ ಮೂರು ವರ್ಷದ ಮಗನನ್ನು ಮೊಸಳೆ ನುಂಗಿರಲು, ಏಳು ವರ್ಷಗಳಾದ ಮೇಲೆ ನಂಬಿಯು ಸಮುದ್ರರಾಜನಿಗೆ ಅಪ್ಪಣೆ ಮಾಡಿ ಆ ಮಗುವನ್ನು ಮೊಸಳೆಯಿಂದ ಹಿಂದಕ್ಕೆ ಕೊಡಿಸಿದ.

## ೫೭. ಪೂಸಲೆಯಾಂಡರ್

ಚೋಳರಾಜ್ಯದಲ್ಲಿ ಪೂಸಲೆಯಾಂಡರೆಂಬ ತಪಸ್ವಿ ಕರಿಯೂರಿನ ರಾಜ. ಅರಿನೃಪಾಲ ಮದವಿದಳಿತ ಮೃಗರಾಟ್ ಎಂಬ ಬಿರುದು ಹೊಂದಿ ಶಿವ ಭಕ್ತನಾಗಿದ್ದ. ಆತ ಶಿವಾಲಯವೊಂದನ್ನು ಕಟ್ಟುವ ಸಂಕಲ್ಪ ಮಾಡಿ ಶಿಲ್ಪಗಳಿಂದ ನಿರ್ಮಿಸಿದ. ಅದರ ಸೌಂದರ್ಯವನ್ನು ನೋಡಲು ಹಲವಾರು ಜನರು ಬರುತ್ತಿದ್ದರು. ಪೂಸಲೆಯಾಂಡರು ಕರಿಯೂರು ನಗರಕ್ಕೆ ಬಂದರು. ದೇವಾಲಯ ನೋಡಿ ಆನಂದಿಸಿರು. ಅರಸ ಇವರ ಬಗ್ಗೆ ಕೇಳಿ ದೇವಾಲಯ ನೋಡಿ ಧನ್ಯರಾಗಬೇಕು ಎಂದು ಕೈ ಮುಗಿದು "ಮಹಾನುಭಾವ ನಿನ್ನ ದರ್ಶನದಿಂದ ಕೃತಾರ್ಥನಾದೆ, ರಕ್ಷಿಸು" ಎಂದ

"ಆ ಪರಶಿವನು ನನ್ನಲ್ಲಿ ಪ್ರವೇಶಿಸಿರುವನು"

"ಹೇಗೆ ಹೊಕ್ಕಿರುವನು, ನಮಗೆ ತೋರಿಸಿ ಕೃತಾರ್ಥರನ್ನಾಗಿ ಮಾಡಿ"

"ಆಯ್ತು" ಎಂದು ತನ್ನ ಎದೆಯನ್ನು ಬಿಚ್ಚಿ ರಾಜನಿಗೆ ತೋರಲು ಸಂತೋಷದಿಂದ ನಮಸ್ಕರಿಸಿ ಸ್ತುತಿಸಿದನು. ಆಗ ಶಿವ ಪೂಸಲೆಯಾಂಡರನ್ನು ಕೈಲಾಸಕ್ಕೆ ಕರೆದೊಯ್ದು ಗಣ ಪದವಿಯನ್ನಿತ್ತ.

ಮತ್ತೊಂದು ಕಥೆಯಲ್ಲಿ ಹೀಗಿದೆ,

ತೊಂಡಿರಮಂಡಲದ ಸುಸ್ಥಿರಪುರದಲ್ಲಿ ವಿಪ್ರಕುಲದಲ್ಲಿ ಹುಟ್ಟಿದ ಭಕ್ತ. ಒಮ್ಮೆ ಮನಸ್ಸಿನಲ್ಲಿಯೇ ಪ್ರಾಣಲಿಂಗ ಪೂಜೆ ಮಾಡುತ್ತಿರುವಾಗ ಕಾಂಚೀಪುರದಲ್ಲಿ ಮನುಚೇಂದ್ರ ಚೋಳರಾಯನ ಪ್ರತಿಷ್ಠೆ ಮಾಡಬೇಕೆಂದಿದ್ದ. ಲಿಂಗ ಮಾಯವಾಯಿತು. ರಾಜನು ಚಿಂತಿಸುತ್ತಿರಲು ಶಿವನು ಪೂಸಲೆಯಾಂಡರಿನ ಹೃದಯದಲ್ಲಿರುವುದಾಗಿ ತಿಳಿಸಿದ. ರಾಜ ಈತನಲ್ಲಿ ಬಂದು ಪ್ರಾರ್ಥಿಸಲು ತನ್ನ ಹೃದಯ ಕಮಲದಲ್ಲಿದ್ದ ಪಂಚಮುಖಿ ದಶಭುಜದ ಶಿವನನ್ನು ತೋರಿದ. ಶಿವನು ಭಕ್ತನನ್ನು ಕೈಲಾಸಕ್ಕೆ ಕರೆದೊಯ್ದು ದೇವಾಲಯ ಕಟ್ಟಲು ಹಣವಿಲ್ಲದ ಈ ಶರಣ ಶರೀರವೆಂಬ ಕ್ಷೇತ್ರದಲ್ಲಿ ಪ್ರಾಣಲಿಂಗ ಪ್ರತಿಷ್ಠಾಪಿಸಿ ನಿರ್ಮಲವೇ ನೈವೇದ್ಯವಾಗಿ ಪಡೆದು ಶಿವನ ಕರುಣೆ ಪಡೆದ.

(ಮುಂದುವರಿಯುವುದು)

ನಿಮಗಿದು ತಿಳಿದಿರಲಿ

# ಅವರೆ, ಅಲಸಂದೆ, ಬಟಾಣಿ, ಎಳ್ಳು



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

## ಅವರೆ

ಅವರೆಯು ಸಿಹಿ ಮತ್ತು ಒಗರು, ರುಚಿಕರ, ವಿಪಾಕದಲ್ಲಿ ಹುಳಿಯಾಗುವುದು. ವಿಶೇಷ ದಾಹಗುಣವುಳ್ಳುದು. ಉಷ್ಣತೆ, ರಕ್ತಪಿತ್ತ, ವಾತ, ಹೊಟ್ಟೆಯ ಬಿಗಿತ ಇವುಗಳನ್ನು ಉಂಟುಮಾಡುವುದು. ಎದೆಹಾಲನ್ನು ಹೆಚ್ಚಿಸುವುದು, ವಿಷ, ಕಫ, ಶೋಭೆ ಇವುಗಳನ್ನು ನಿವಾರಿಸುವುದು. ವಿಶೇಷ ಮೂತ್ರವನ್ನುಂಟುಮಾಡುವುದಲ್ಲದೆ ವೀರ್ಯವನ್ನು ನಷ್ಟಗೊಳಿಸುತ್ತದೆ. ಸಕಲ ವಿಧ ಬೇಳೆಗಳನ್ನೂ ಸ್ವಲ್ಪ ಹುರಿದು ಅನಂತರ ಸಾರು, ತೊವೆಗಳಿಗೆ ಉಪಯೋಗಿಸುವುದು ಹಿತಕರವಾಗಿದೆ.

## ಅಲಸಂದೆ

ಅಲಸಂದೆಯು ಒಗರು, ಒರಟು, ವಾಯುವನ್ನು ಹೆಚ್ಚಿಸುವುದು, ಕಫ ಪಿತ್ತಗಳನ್ನು ಶಾಂತಗೊಳಿಸುವುದು, ಬಲಕರವಾದುದಲ್ಲ. ಇದರಲ್ಲಿ ಒಗರು ರಸವಿರುವುದರಿಂದ ಮಲವನ್ನು ಸಡಿಲಿಸತಕ್ಕ ಗುಣವು ಇರುವುದಿಲ್ಲ. ಮೂತ್ರವನ್ನು ಹೆಚ್ಚಿಸುವುದಿಲ್ಲ. ವಿಪಾಕದಲ್ಲಿ ಸಿಹಿಯಾಗುವುದು, ಎದೆ ಹಾಲನ್ನು ಹೆಚ್ಚಿಸುವುದು. ಇದು ಬಿಳುಪು ಕೆಂಪು, ಕಪ್ಪು, ಬಣ್ಣಗಳಿಂದ ಮೂರು ವಿಧವಾಗಿದೆ. ಅವುಗಳಲ್ಲಿ ಯಾವುದು ದೊಡ್ಡದಾಗಿ ಬೆಳೆಯುವುದೋ ಅದರಲ್ಲಿಯೇ ಮೇಲಿನ ಗುಣಗಳು ವಿಶೇಷವಾಗಿರುತ್ತದೆ. ಅಲಸಂದೆಯು ಪುರುಷರ ವೀರ್ಯವೃದ್ಧಿಯನ್ನೂ, ಸ್ತ್ರೀಯರ ಎದೆ ಹಾಲಿನ ವೃದ್ಧಿಯನ್ನೂ, ದೇಹಪುಷ್ಟಿಯನ್ನೂ ಉಂಟುಮಾಡುತ್ತದೆ. ಮತ್ತು ಸ್ತ್ರೀಯರ ರಜಸ್ಸನ್ನು ಶುದ್ಧಿಗೊಳಿಸುತ್ತದೆ.

## ಬಟಾಣಿ

ಬಟಾಣಿಯು ಶೀತಲ, ವಾಯುವನ್ನು ಹೆಚ್ಚಿಸುವುದು, ರಕ್ತವಿಕಾರ, ಪಿತ್ತವಿಕಾರ ಮತ್ತು ಕಫದ ವಿಕಾರವನ್ನು ಶಾಂತಗೊಳಿಸುತ್ತದೆ. ಹಸಿಯ ಬಟಾಣಿಯು ತಿನ್ನುವುದಕ್ಕೆ ರುಚಿಯೇ ಹೊರತು ಆರೋಗ್ಯಕರವಲ್ಲ. ಇದರಲ್ಲ ಚರ್ಮವನ್ನು ಶುದ್ಧಗೊಳಿಸುವ ಶಕ್ತಿಯು ವಿಶೇಷವಾಗಿದೆ. ಇದರ ಚೂರ್ಣವನ್ನು ಹಾಲಿನೊಡನೆ ಕಲೆಸಿ ಮುಖಕ್ಕೆ ತಿಕ್ಕುವುದರಿಂದ ಮುಖದ ಕಲೆಗಳು ಹೋಗುತ್ತವೆ.

## ಎಳ್ಳು

ಎಳ್ಳು ಉಷ್ಣ ಗುಣವುಳ್ಳುದು. ವಾತ, ವ್ರಣ, ಚರ್ಮ ರೋಗಗಳಿಗೆ ದಿವ್ಯೌಷಧವಾಗಿದೆ. ರಕ್ತವೃದ್ಧಿ, ವೀರ್ಯವೃದ್ಧಿಗಳನ್ನು ಉಂಟುಮಾಡುವುದು, ಮೂಲವ್ಯಾಧಿಯನ್ನು ಶಾಂತಗೊಳಿಸುವುದು, ಸ್ತ್ರೀಯರ ತಡೆದಿದ ಮಾಸಿಕ ರಜೋಧರ್ಮವನ್ನು ಸರಿಪಡಿಸುವುದು, ಮೇಹವ್ಯಾಧಿಯವರಿಗೆ ಎಳ್ಳು ಬಹಳ ಕೆಡಕನ್ನುಂಟುಮಾಡುತ್ತದೆ. ಬೇಗ ಜೀರ್ಣಿಸುವುದಿಲ್ಲ. ಔಷಧಗಳಿಗೆಲ್ಲಾ ಕರಿಯ ಎಳ್ಳೇ ವಿಶೇಷವಾಗಿ ಉಪಯೋಗಿಸಲ್ಪಡುತ್ತದೆ.

- ಎಳ್ಳು ಮತ್ತು ಸೌತೆಬೀಜಗಳನ್ನು ಸಮವಾಗಿ ಅರೆದು ಹಾಲು ತುಪ್ಪಗಳೊಡನೆ ಕೂಡಿಸಿ ಕುಡಿಯುವುದರಿಂದ ಸಕಲವಿಧ ಕಟ್ಟುಮೂತ್ರ ಮತ್ತು ಉರಿಮೂತ್ರಗಳು ಗುಣವಾಗುತ್ತವೆ.
- ಎಳ್ಳು ಮತ್ತು ಕರಿಯ ಮಣ್ಣು ಇವೆರಡನ್ನೂ ಅರೆದು ಹಚ್ಚುವುದರಿಂದ ಗೇರು ತಗುಲುವುದರಿಂದ ಉಂಟಾಗುವ ಊತವು ಇಳಿಯುತ್ತದೆ.
- ಎಳ್ಳನ್ನು ಹಾಲಿನೊಡನೆ ಅರೆದು ಹಚ್ಚುವುದರಿಂದಲೂ ಗೇರಿನಿಂದುಂಟಾದ ವಿಕಾರವು ಶಾಂತವಾಗುತ್ತದೆ.
- ಎಳ್ಳನ್ನು ಹಾಲಿನೊಡನೆ ಅರೆದು ತುಪ್ಪದೊಡನೆ ಕೂಡಿಸಿ ಹಚ್ಚುವುದರಿಂದಲೂ ಗೇರಿನ ಸಂಪರ್ಕದಿಂದುಂಟಾದ ತೊಂದರೆಯು ಶಾಂತವಾಗುತ್ತದೆ.
- ಎಳ್ಳು ಗಿಡದ ಕೆಳಗಿನ ಮಣ್ಣು ಮತ್ತು ಎಳ್ಳು, ಇವೆರಡನ್ನೂ ಹಾಲಿನೊಡನೆ ಅರೆದು ಲೇಪಿಸುವುದರಿಂದ ಗೇರಿನ ಸಂಪರ್ಕದಿಂದ ಉಂಟಾಗಿರುವ ಬಹಳ ಹಳೆಯ ಊತವೂ ಇಳಿದು ಹೋಗುತ್ತದೆ.
- ಎಳ್ಳು, ಸೈಂಧವಲವಣ, ಅತಿಮಧುರ, ಬೇವಿನ ಎಲೆ, ಮರದರಿಶಿನ ಮತ್ತು ಲಾಲ್‌ಚಿಗಡು ಇವುಗಳನ್ನು ಸಮಭಾಗವಾಗಿ ಅರೆದು ತುಪ್ಪದೊಡನೆ ಕೂಡಿಸಿ, ಹಚ್ಚುವುದರಿಂದ ಗಾಯ ಅಥವಾ ಹುಣ್ಣುಗಳಲ್ಲಿ ಬರುವ ಕೀವು ರಕ್ತಗಳು ಕಡಿಮೆಯಾಗಿ ಅವುಗಳು ಶುದ್ಧವಾಗುತ್ತವೆ.





- ಎಳ್ಳು ಮತ್ತು ಬೇವಿನ ಎಲೆಗಳನ್ನು ಸಮಭಾಗವಾಗಿ ತಂದು ಶುದ್ಧವಾದ ಎಳ್ಳೆಣ್ಣೆಯಲ್ಲಿ ಕರಿಯಬೇಕು, ಅನಂತರ ಎಣ್ಣೆಯೊಡನೆಯೇ ಅವುಗಳನ್ನು ನುಣ್ಣಗೆ ಅರೆದು ಮಲಹಮ್ (ಮುಲಾಮು) ಮಾಡಿಕೊಳ್ಳಬೇಕು. ಈ ಲೇಪವನ್ನು ಲೇಪಿಸುವುದರಿಂದ ಚಾಕು, ಕತ್ತಿ ಮುಂತಾದವುಗಳಿಂದ ಉಂಟಾಗಿರುವ ಗಾಯ ಮತ್ತು ಏಟು ತಗುಲುವುದರಿಂದ ಉಂಟಾಗಿರುವ ಗಾಯ, ಸಕಲವಿಧ ಹುಣ್ಣುಗಳು ಮತ್ತು ಗುಳ್ಳೆ ಕುರಗಳು ಇವೆಲ್ಲವೂ ಮಾಯವಾಗುತ್ತವೆ. ಎಷ್ಟೋ ಸಲ ಪರೀಕ್ಷಿಸಲ್ಪಟ್ಟಿದೆ.
- ಎಳ್ಳು, ಬೇವಿನೆಲೆ, ಇವೆರಡನ್ನೂ ಅರೆದು ಶುದ್ಧವಾದ ಜೇನುತುಪ್ಪದೊಡನೆ ಕೂಡಿಸಿ ಹಚ್ಚುವುದರಿಂದ ಎಲ್ಲಾ ವಿಧ ಹುಣ್ಣುಗಳೂ ಶುದ್ಧವಾಗುತ್ತವೆ.
- ಎಳ್ಳು, ಜವೆಹಿಟ್ಟು, ಅತಿಮಧುರದ ಚೂರ್ಣ ಇವುಗಳನ್ನು ಸಮಭಾಗದಿಂದ ಅರೆದು ತುಪ್ಪ ಅಥವಾ ಕೊಬರಿಎಣ್ಣೆ ಎಳ್ಳೆಣ್ಣೆಯೊಡನೆ ಕೂಡಿಸಿ ಬಿಸಿಮಾಡಿ ಬೆಚ್ಚಗಿರುವುದನ್ನೇ ಲೇಪಿಸುವುದರಿಂದ ಗಾಯಗಳ ಉರಿ ಮತ್ತು ವೇದನೆಯು ಶಾಂತವಾಗುತ್ತದೆ.
- ೧ ತೊಲ ಕರಿಯ ಎಳ್ಳನ್ನು ಅರೆದು, ಅರ್ಧ ತೊಲ ಸಕ್ಕರೆಯೊಡನೆ ತಿಂದು ಮೇಲೆ ೧ ಚಟಾಕು ಆಡಿನ ಹಾಲನ್ನು ಕುಡಿಯುವುದರಿಂದ, ಮೂಲವ್ಯಾಧಿಯವರಿಗೆ ಬೀಳುತ್ತಿರುವ ರಕ್ತವು ಕೂಡಲೇ ನಿಲ್ಲುತ್ತದೆ. ಎಳ್ಳು ಸಕ್ಕರೆಗಳನ್ನು ಹಾಲಿನೊಡನೆ ಅರೆದಾದರೂ ಕುಡಿಯಬಹುದು. ಪರೀಕ್ಷಿಸಲ್ಪಟ್ಟಿದೆ.
- ೧ ತೊಲ ಕರಿಯ ಎಳ್ಳನ್ನು ಕುಟ್ಟಿ ಬೆಣ್ಣೆಯೊಡನೆ ಕೂಡಿಸಿ ಪ್ರಾತಃಕಾಲದಲ್ಲಿಯೇ ೮ ದಿನಗಳವರೆಗೆ ಸೇವಿಸಿದರೆ ರಕ್ತಮೂಲವ್ಯಾಧಿಯು ಗುಣವಾಗುತ್ತದೆ.
- ಎಳ್ಳನ್ನು ಯಾವಾಗಲೂ ಯಾರೂ ಆಹಾರರೂಪದಿಂದ ವಿಶೇಷವಾಗಿ ಉಪಯೋಗಿಸದೆ ಔಷಧರೂಪವಾಗಿಯೇ ಉಪಯೋಗಿಸುವುದುತ್ತಮ. ❐

## ಬೂದಿಗುಂಬಳಕಾಯಿ

ಬೂದಿಗುಂಬಳವು ತಂಪು ಗುಣವುಳ್ಳದ್ದು. ಮೂತ್ರದ ಕಟ್ಟು ಉರಿಮೂತ್ರಗಳನ್ನು ಶಾಂತಗೊಳಿಸುವುದು, ಮೂತ್ರಕೋಶದ ವಿಕಾರವನ್ನು ನಿವಾರಿಸುವುದು. ಪಾಂಡುರೋಗ, ಜ್ವರ, ಕ್ಷಯ, ರಕ್ತದ ವಾಂತಿ, ರಕ್ತದ ಭೇದಿ ಇವುಗಳಿಗೆ ಶಮನಕಾರಿಯಾದುದು. ಶುದ್ಧ ರಕ್ತವನ್ನು ಹುಟ್ಟಿಸುವುದು, ಯಕೃತ್ತು (ಲಿವರ್) ಮತ್ತು ಹೊಟ್ಟೆಯಲ್ಲಿ ಸೇರಿರುವ ಕಾವನ್ನು ಶಾಂತಿಗೊಳಿಸುವುದು. ಮೇಹವ್ಯಾಧಿಯನ್ನು ನಿವಾರಿಸಿ ದೇಹ ಪುಷ್ಟಿಯನ್ನು ಕೊಟ್ಟು ವೀರ್ಯ ಮತ್ತು ಬಲವನ್ನು ಸ್ಥಿರಗೊಳಿಸುತ್ತದೆ. ಮಂದಾಗ್ನಿ, ಅಜೀರ್ಣ, ಸಂಗ್ರಹಣಿ, ಮೂತ್ರದ ಕಲ್ಲು, ಕ್ರಿಮಿರೋಗ ಮುಂತಾದವುಗಳ ತೊಂದರೆಯನ್ನು ದೂರಮಾಡುತ್ತದೆ. ಮತ್ತು ಕ್ಷಯ ರೋಗಿಗಳಿಗೆ ಇದನ್ನು ಆಹಾರ ರೂಪವಾಗಿ ಕೊಡುವುದರಿಂದ ವಿಶೇಷ ಪ್ರಯೋಜನವುಂಟಾಗುತ್ತದೆ. ಈ ಕುಂಬಳದ ೩ ತೊಲ ರಸದಲ್ಲಿ ೪ ಗುಂಜಿ ಯವಕ್ಷಾರ ಮತ್ತು ೨ ಗುಂಜಿ ಹುರಿದ ಹಿಂಗು ಇವುಗಳನ್ನು ಅರೆದು ಕುಡಿಯುವುದರಿಂದ ಕಿಬ್ಬೊಟ್ಟೆಯ ಶೂಲ, ಮೂತ್ರನಾಳದ ಶೂಲ, ಸಕ್ಕರೆ ರೋಗ ನಿವಾರಣೆಯಾಗುವುದು ಮೂತ್ರದಲ್ಲಿನ ಕಲ್ಲು ಕರಗುತ್ತದೆ.

ಬೂದಿಗುಂಬಳದ ಬೀಜ, ಸೌತೆಕಾಯಿಯ ಬೀಜ, ಇವೆರಡನ್ನೂ ನೀರನೊಡನೆ ಅರೆದು ಕಿಬ್ಬೊಟ್ಟೆಗೆ ಮಂದವಾಗಿ ಲೇಪಿಸುವುದರಿಂದ ಮೂತ್ರದ ತಡೆಯು ದೂರವಾಗಿ ಮೂತ್ರವಿಸರ್ಜನೆಯು ಆಯಾಸವಿಲ್ಲದೆ ಆಗುತ್ತದೆ. ಬೂದಿಗುಂಬಳದ ರಸಕ್ಕೆ ಯವಕ್ಷಾರ ಮತ್ತು ಬೆಲ್ಲವನ್ನು ಕೂಡಿಸಿ ಕುಡಿಯುವುದರಿಂದ ಮೂತ್ರದ ತಡೆ, ಮೂತ್ರದ ಕಲ್ಲು ಮತ್ತು ಸಕ್ಕರೆ ಹೋಗುವಿಕೆ ಮುಂತಾದವುಗಳು ಗುಣವಾಗುತ್ತವೆ.

# ಹಳೆಯ ವಿದ್ಯಾರ್ಥಿಗಳ ಸಂಘದ
# ನಲವತ್ತಾರನೇ ಸರ್ವಸದಸ್ಯರ ಮಹಾಧಿವೇಶನ

- ವರದಿ : ಎಚ್.ಎಸ್. ಸಿದ್ಧಗಂಗಪ್ಪ




ಪರಮ ಪೂಜ್ಯ ಶ್ರೀ ಶ್ರೀಗಳವರಿಂದ ಅನುಗ್ರಹ ಭಾಷಣ

ಅದೊಂದು ವಿಶಿಷ್ಟ, ಅಪೂರ್ವ ಸಮಾವೇಶ. ರಾಜ್ಯದ ನಾನಾ ಮೂಲೆಗಳಿಂದ ಸ್ವಯಂಪ್ರೇರಿತರಾಗಿ, ಸಂತೋಷದಿಂದ ಭಾಗವಹಿಸಿದ್ದ ಅಪೂರ್ವ ದೃಶ್ಯ. ಎಲ್ಲರ ಮುಖದಲ್ಲಿ ಸಂತೋಷ, ನೆಮ್ಮದಿ, ಧನ್ಯತೆಯ ಭಾವನೆ ಮುಪ್ಪರಿಗೊಂಡಿತ್ತು. ಅಧಿಕಾರಿ, ಗುಮಾಸ್ತ, ಶಿಕ್ಷಕ, ವ್ಯಾಪಾರಿ, ಕೃಷಿಕ ಎಂಬ ಯಾವುದೇ ತಾರತಮ್ಯವಿರಲಿಲ್ಲ. ವೃತ್ತಿ ಯಾವುದಾದರೇನು? ಮಾತೃ ವಾತ್ಸಲ್ಯದ ಮುಂದೆ ಎಲ್ಲರೂ ಒಂದೇ !

ಸಂದರ್ಭ : ಡಿಸೆಂಬರ್ ೩೧, ೨೦೦೦ದಂದು ಶ್ರೀಮಠದ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಆವರಣದಲ್ಲಿ ತ್ರಿವಿಧ ದಾಸೋಹ ಮೂರ್ತಿ, ಕಾಯಕಯೋಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಸಮಾವೇಶಗೊಂಡಿದ್ದ ೪೬ನೇ ಹಳೇ ವಿದ್ಯಾರ್ಥಿಗಳ ಸಂಘದ ಸರ್ವ ಸದಸ್ಯರ ಮಹಾಧಿವೇಶನ.








ಡಾ. ಎಂ.ಎನ್. ಚನ್ನಬಸಪ್ಪನವರಿಂದ ಸ್ವಾಗತ




ವಿಧಾನ ಪರಿಷತ್ತಿನ ಸದಸ್ಯರೂ, ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಎಸ್. ಚನ್ನಬಸವಯ್ಯ ಅವರು ಮಾತನಾಡುತ್ತಿರುವುದು.

ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಚಾರ್ಯರೂ, ಹಳೆ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳೂ ಆದ ಡಾ. ಎಂ.ಎನ್. ಚನ್ನಬಸಪ್ಪನವರು ಸಭೆಗೆ ಆಗಮಿಸಿದವರನ್ನು ಹೃದಯತುಂಬಿ ಸ್ವಾಗತಿಸಿದರು. ಇದು ಔಪಚಾರಿಕ ಸ್ವಾಗತವಾಗಿರಲಿಲ್ಲ. ಆ ಸಂದರ್ಭದಲ್ಲಿ ಅವರಾಡಿದ ಒಂದೊಂದು ಮಾತುಗಳೂ ಅಂತರಾಳದಿಂದ ಮೂಡಿಬಂದ ಆತ್ಮೀಯ ನುಡಿಗಳಾಗಿದ್ದವು. ಪರಮಪೂಜ್ಯ ಶ್ರೀಶ್ರೀಗಳವರು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಸಲ್ಲಿಸುತ್ತಿರುವ ಅಮೂಲ್ಯ ಸೇವೆಯನ್ನು ಭಾವಪರವಶರಾಗಿ ಕೃತಜ್ಞತೆಯಿಂದ ಸ್ಮರಿಸಿದರು.

ಇದೇ ಸಂದರ್ಭದಲ್ಲಿ ೨೦೦೦ನೇ ಇಸವಿಯಲ್ಲಿ ನಮ್ಮನ್ನಗಲಿದ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ ಮತ್ತು ಶ್ರೀಕ್ಷೇತ್ರದ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ ೧೧ ಜನರಿಗೆ ಹಾಗೂ ರಾಷ್ಟ್ರನಾಯಕ, ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ, ಮಾಜಿ ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲ್, ಶ್ರೀಮಠದ ಅಭಿಮಾನಿ, ಮಾಜಿ ಮಂತ್ರಿ ಶ್ರೀ ಲಕ್ಷ್ಮೀನರಸಿಂಹಯ್ಯ, ಹಿರಿಯ ಸಾಹಿತಿ ಪ್ರೊ. ಎಸ್.ವಿ. ಪರಮೇಶ್ವರ ಭಟ್ಟ, ಖ್ಯಾತ ಅಂಕಣಕಾರ ಡಾ. ಹಾ.ಮಾ. ನಾಯಕ್ ಮೊದಲಾದವರಿಗೆ ಭಾವಪೂರ್ಣ ಶ್ರದ್ಧಾಂಜಲಿಯನ್ನು ಸಲ್ಲಿಸಲಾಯಿತು.

ಹಳೆ ವಿದ್ಯಾರ್ಥಿ ಸಂಘದ ಸಹಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸಂಘದ ವಾರ್ಷಿಕ ವರದಿ ಹಾಗೂ ಲೆಕ್ಕಪತ್ರವನ್ನು, ಪ್ರೊ. ಬಿ. ಗಂಗಾಧರಯ್ಯನವರು ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವರದಿ ಹಾಗೂ ೨೦೦೧ನೇ ಸಾಲಿನ ಮುಂಗಡ ಪತ್ರವನ್ನು ಮಂಡಿಸಿದರು. ಸಿದ್ಧಗಂಗಾ ಮಾಸಪತ್ರಿಕೆಯ ವರದಿ ಹಾಗೂ ೨೦೦೧ನೇ ಸಾಲಿನ ಆಯವ್ಯಯವನ್ನು ಪತ್ರಿಕೆಯ ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯನವರು ಮಂಡಿಸಿ, ಪತ್ರಿಕೆಯು ಆಕರ್ಷಕವಾಗಿ ಬರುತ್ತಿರುವುದನ್ನು ಸಂತೋಷದಿಂದ ಸ್ಮರಿಸಿ, ಪ್ರಸಾರ ಸಂಖ್ಯೆಯನ್ನು ಹೆಚ್ಚಿಸುವಂತೆ ಸರ್ವ ಸದಸ್ಯರಲ್ಲಿ ಮನವಿ ಮಾಡಿಕೊಂಡರು.

ಕಳೆದ ವರ್ಷ ಮೈಸೂರಿನಲ್ಲಿ ಅಸ್ತಿತ್ವಕ್ಕೆ ಬಂದ ಹಳೆಯ ವಿದ್ಯಾರ್ಥಿಗಳ ಸಂಘದ ಮೈಸೂರು ಶಾಖೆಯ

ಕಾರ್ಯಚಟುವಟಿಕೆಗಳನ್ನು ಶಾಖೆಯ ಕಾರ್ಯದರ್ಶಿಗಳಾದ ಶ್ರೀ ತಾಯೂರು ವಿಠಲಮೂರ್ತಿಯವರು ಪರಿಚಯ ಮಾಡಿಕೊಟ್ಟರು. ಶಾಖೆ ಹಮ್ಮಿಕೊಂಡಿರುವ ಕಾರ್ಯಯೋಜನೆಗಳನ್ನು ಪ್ರಸ್ತಾಪ ಮಾಡಿ, ಈಗಾಗಲೇ ಮೈಸೂರಿನಲ್ಲಿ ಪ್ರಮುಖ ರಸ್ತೆಗೆ ಪರಮಪೂಜ್ಯ ಶ್ರೀಶ್ರೀಗಳವರ ಹೆಸರನ್ನು ನಾಮಕರಣ ಮಾಡಿದ ಬಗ್ಗೆ ತಿಳಿಸಿದರಲ್ಲದೇ ಪ್ರಮುಖ ಬಡಾವಣೆಯೊಂದರಲ್ಲಿ ಶ್ರೀಶ್ರೀಗಳವರ ಹೆಸರಿನಲ್ಲಿ 'ಸಮುದಾಯ ಭವನ'ದ ನಿರ್ಮಾಣದ ಉದ್ದೇಶವನ್ನು ಈ ಸಂದರ್ಭದಲ್ಲಿ ತಿಳಿಸಿದರು.


ಅಗಲಿದ ಗಣ್ಯರಿಗೆ ಶ್ರದ್ಧಾಂಜಲಿ


ಮಹಾಧಿವೇಶನದಲ್ಲಿ ಭಾವಗಿಸಿದ ಹಳೇ ವಿದ್ಯಾರ್ಥಿಗಳು

ಶ್ರೀ ಕೆ.ಎಚ್. ಶಿವರುದ್ರಯ್ಯನವರು ಮೈಸೂರು ಹಾಗೂ ಬೆಂಗಳೂರು ನಗರ ಶಾಖೆಯ ಪದಾಧಿಕಾರಿಗಳನ್ನು ಸಭೆಗೆ ಪರಿಚಯಿಸಿದರು.

ಬೆಂಗಳೂರು ನಗರ ಶಾಖೆಯ ಕಾರ್ಯ ಚಟುವಟಿಕೆಗಳನ್ನು ಶಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ರಂಗಹನುಮಯ್ಯ ಅವರು ಪರಿಚಯ ಮಾಡಿಕೊಟ್ಟರಲ್ಲದೆ, ಬೆಂಗಳೂರಿನಲ್ಲಿ ಸುಸಜ್ಜಿತವಾದ ಮಾದರಿ ಶಾಲೆಯನ್ನು ಪ್ರಾರಂಭಿಸುವ ಬಗ್ಗೆ ಪ್ರಸ್ತಾಪ ಮಾಡಿ, ಅದಕ್ಕಾಗಿ ನಿವೇಶನವನ್ನು ಪಡೆಯಲು ಸಂಘದ ಪದಾಧಿಕಾರಿಗಳು ಮಾಡುತ್ತಿರುವ ಪ್ರಯತ್ನವನ್ನು ತಿಳಿಸಿದರು. ಈಗಾಗಲೇ ಅಸ್ತಿತ್ವಕ್ಕೆ ಬಂದಿರುವ ಮೈಸೂರು ಹಾಗೂ ಬೆಂಗಳೂರು ನಗರ ಶಾಖೆಗಳ ಮಾದರಿಯಂತೆ ಚಿತ್ರದುರ್ಗ, ದಾವಣಗೆರೆ, ಹಾಸನ ಜಿಲ್ಲೆಗಳಲ್ಲಿಯೂ ಪ್ರಾರಂಭಿಸುವ ಬಗ್ಗೆ ಪ್ರಸ್ತಾಪ ಮಾಡಲಾಯಿತು. ಈ ಬಗ್ಗೆ ಕ್ರಮವಾಗಿ ಶ್ರೀ ನಾಗೇಶ್, ಶ್ರೀ ಕೆ.ಎಸ್. ಸ್ವಾಮಿ ಹಾಗೂ ಶ್ರೀ ಗುರುದೇವಯ್ಯ ಅವರು ಅಭಿಪ್ರಾಯಗಳನ್ನು ಮುಂದಿಟ್ಟರು.

ಹಳೆಯ ವಿದ್ಯಾರ್ಥಿಗಳ ಸಂಘದ ಬೆಂಗಳೂರು ಶಾಖೆಯ ಉಪಾಧ್ಯಕ್ಷರು, ಹಿರಿಯ ಶ್ರೇಣಿಯ ಕೆ.ಎ.ಎಸ್. ಅಧಿಕಾರಿಗಳಾದ ಶ್ರೀ ಕೆ.ಎನ್. ಗೋವಿಂದರಾಜ್ ಅವರು ಮಾತನಾಡಿ ''ಪರಮಪೂಜ್ಯ ಶ್ರೀಶ್ರೀಗಳವರ ಕೃಪಾಶೀರ್ವಾದವಿಲ್ಲದೇ ಹೋಗಿದ್ದರೆ ನಾನು ಈ ಮಟ್ಟಕ್ಕೆ ಬರುತ್ತಿರಲಿಲ್ಲ. ಹದಿಮೂರು ವರ್ಷಗಳ ಕಾಲ ಶ್ರೀಮಠದಲ್ಲಿ







ಹಳೆಯ ವಿದ್ಯಾರ್ಥಿಗಳ ಸಂಘದ ಬೆಂಗಳೂರು ಶಾಖೆ ಪದಾಧಿಕಾರಿಗಳು



ಹಳೆಯ ವಿದ್ಯಾರ್ಥಿಗಳ ಸಂಘದ ಮೈಸೂರು ಶಾಖೆ ಪದಾಧಿಕಾರಿಗಳು

ವ್ಯಾಸಂಗ ಮಾಡಿದ ಅವಧಿ ನನ್ನ ಬದುಕಿನಲ್ಲಿ ಸುವರ್ಣಯುಗ" ಎಂದು ಭಾವುಕರಾಗಿ ಶ್ರೀಶ್ರೀಗಳವರಿಗೆ ಕೃತಜ್ಞತೆಗಳನ್ನು ಸಲ್ಲಿಸಿದರು. 'ಸಿದ್ಧಗಂಗಾ' ಮಾಸಪತ್ರಿಕೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ ಶ್ರೀ ಗೋವಿಂದರಾಜು ಅವರು ಪ್ರತಿಯೊಂದು ಗ್ರಾಮ ಪಂಚಾಯಿತಿಗೂ ಒಂದೊಂದು ಪ್ರತಿಯನ್ನು ಕಳುಹಿಸುವ ವ್ಯವಸ್ಥೆ ಮಾಡುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗುವ ವಿಚಾರವನ್ನು ಪ್ರಕಟಿಸಿದರು. ಗ್ರಾಮೀಣ ನೈರ್ಮಲ್ಯ ಯೋಜನೆಯಡಿ ಸರಕಾರದಿಂದ ದೊರೆಯುವ ಸೌಲಭ್ಯಗಳನ್ನು ಪರಿಶೀಲಿಸಿ ಶ್ರೀ ಮಠದಲ್ಲಿ ಹಮ್ಮಿಕ್ರೊಂಡಿರುವ ಒಳಚರಂಡಿ ವ್ಯವಸ್ಥೆಗೆ ದೊರೆಯಬಹುದಾದ ಆರ್ಥಿಕ ನೆರವನ್ನು ದೊರಕಿಸಿಕೊಡುವುದಾಗಿ ತಿಳಿಸಿದ ಶ್ರೀಯುತರು ಈ ಯೋಜನೆಯ ಅನುಷ್ಠಾನಕ್ಕೆ ೧೦ ಸಾವಿರ ರೂ.ಗಳ ಕೊಡುಗೆಯನ್ನು ಈ ಸಂದರ್ಭದಲ್ಲಿ ಪ್ರಕಟಿಸಿದರು.

ಪರಮಪೂಜ್ಯ ಶ್ರೀಶ್ರೀಗಳವರು ಕಳೆದ ಆರು ದಶಕಗಳಿಂದ ಬಡವರಿಗೆ, ದೀನ-ದಲಿತರ ಶಿಕ್ಷಣಕ್ಕೆ ಅವರು ಭವಿಷ್ಯವನ್ನು ಮೂಡಿಸಲು ಶ್ರಮಿಸಿರುವುದನ್ನು ಕೃತಜ್ಞತೆಯಿಂದ ಸ್ಮರಿಸಿದ ಶ್ರೀ ಗೋವಿಂದರಾಜು ಅವರು ಶ್ರೀಶ್ರೀಗಳವರಿಗೆ ನೋಬೆಲ್ ಪ್ರಶಸ್ತಿ ಬಾರದಿರುವುದಕ್ಕೆ ವಿಷಾದವನ್ನು ವ್ಯಕ್ತಪಡಿಸಿದರು.

ವೇದಿಕೆಯಲ್ಲಿ ಉಪಸ್ಥಿತರಿದ್ದ ವಿಧಾನಪರಿಷತ್ ಸದಸ್ಯರೂ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಎಸ್. ಚನ್ನಬಸವಯ್ಯ ಅವರು ಮಾತನಾಡಿ ಶ್ರೀಮಠ ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸುತ್ತಿರುವ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿ, ಇತ್ತೀಚೆಗೆ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು ಮಠಾಧೀಶರುಗಳ ಬಗ್ಗೆ ಆಡಿದ ಮಾತುಗಳನ್ನು ಖಂಡಿಸಿದರು. ಶ್ರೀಶ್ರೀಗಳವರಿಗೆ 'ಭಾರತರತ್ನ' ಪ್ರಶಸ್ತಿ ನೀಡಬೇಕು. ಇದರಿಂದ ಆ ಪ್ರಶಸ್ತಿಯ ಮೌಲ್ಯ ಹೆಚ್ಚುತ್ತದೆ ಎಂದು ಅಭಿಪ್ರಾಯಪಟ್ಟರು. ಶ್ರೀ ಕ್ಷೇತ್ರದಲ್ಲಿ ಹಮ್ಮಿಕ್ರೊಳ್ಳುವ ಅಭಿವೃದ್ಧಿ ಕಾರ್ಯಗಳಿಗೆ ತಮ್ಮ ಸೇವೆಯನ್ನು ಬಳಸಿಕೊಳ್ಳುವಂತೆ ವಿನಂತಿಸಿಕೊಂಡರು.

'ಶ್ರೀ ಸಿದ್ಧಗಂಗಾ ಅಭಿವೃದ್ಧಿ ಯೋಜನೆ'ಯ ಬಗ್ಗೆ ಪ್ರಸ್ತಾಪಿಸಿದ ನಿವೃತ್ತ ಮುಖ್ಯ ಇಂಜಿನಿಯರ್, ಹಳೆಯ ವಿದ್ಯಾರ್ಥಿಗಳ ಸಂಘದ ಬೆಂಗಳೂರು ಶಾಖೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಚನ್ನಪ್ಪ ಅವರು ಶ್ರೀ ಕ್ಷೇತ್ರದಲ್ಲಿ ಪ್ರತಿ ವರ್ಷವೂ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಿದೆ. ಅವರಿಗೆಲ್ಲ ಸೂಕ್ತ ಸೌಲಭ್ಯಗಳನ್ನು ಒದಗಿಸಿಕೊಡಬೇಕು. ಈ ನಿಟ್ಟಿನಲ್ಲಿ ಎಲ್ಲರೂ ಕಾರ್ಯೋನ್ಮುಖರಾಗಬೇಕಾಗಿದೆ. ಮಕ್ಕಳಿಗೆ ಒಳ್ಳೆಯ ಶಿಕ್ಷಣದ ಜೊತೆಗೆ ಉತ್ತಮ ಪರಿಸರವೂ ಮುಖ್ಯ. ಉತ್ತಮ ಪರಿಸರ ನಿರ್ಮಾಣ ಮಾಡಲು ಸಾಕಷ್ಟು ಹಣದ ಅವಶ್ಯಕತೆಯಿದೆ. ಅದನ್ನು ಭರಿಸಲು 'ದಾಸೋಹ ನಿಧಿ', 'ಶತಮಾನೋತ್ಸವ ನಿಧಿ'ಗಳಂತೆ 'ಸಿದ್ಧಗಂಗಾ ಅಭಿವೃದ್ಧಿ ಯೋಜನೆ' ನಿಧಿಯ ಅಗತ್ಯವನ್ನು ತಿಳಿಸಿದರು. ಅದಕ್ಕಾಗಿ ಪ್ರತಿಯೊಬ್ಬರೂ ತಮ್ಮ ತಿಂಗಳ ಆದಾಯದಲ್ಲಿ ಒಂದಷ್ಟು ಭಾಗವನ್ನು ಈ ಯೋಜನೆಗೆ ನೀಡಬೇಕು ಎಂದು ವಿನಂತಿಸಿಕೊಂಡರು. ಶ್ರೀ ಬಿ.ಎಸ್. ಚನ್ನಪ್ಪನವರ ಅಭಿಪ್ರಾಯಗಳಿಗೆ ಪೂರಕವಾಗಿ ಮಾತನಾಡಿದ ಶ್ರೀ ಪರ್ವತರಾಜು ಅವರು ಪ್ರತಿಯೊಬ್ಬರೂ ನಿರಂತರವಾಗಿ ತಮ್ಮ ತಿಂಗಳ ಆದಾಯದ ಶೇಕಡ ೧ರಷ್ಟನ್ನು ಕೊಟ್ಟರೂ ಸಾಕು ಉದ್ದೇಶಿತ ಯೋಜನೆಗೆ ಸಾಕಷ್ಟು ಸಂಪನ್ಮೂಲ ಕ್ರೋಢೀಕೃತವಾಗುತ್ತದೆ ಎಂದು ಸಲಹೆ ಮಾಡಿದರು.

ದಾಸೋಹದ ಬಗ್ಗೆ ಶ್ರೀ ಮುದ್ದುರಂಗಯ್ಯ ಅವರು ಶ್ರೀ ಕ್ಷೇತ್ರದ ಅಭಿವೃದ್ಧಿಯ ಬಗ್ಗೆ ಶ್ರೀ ತುಳಸಿರಾಮಯ್ಯ ಅವರು ತಮ್ಮ ಭಾವನೆಗಳನ್ನು ಹಂಚಿಕೊಂಡರು. ಶ್ರೀ ತುಳಸಿರಾಮಯ್ಯ ಅವರು ವಿದ್ಯಾರ್ಥಿಗಳು ಮಳೆ-ಬಿಸಿಲೆನ್ನದೆ ಪ್ರತಿನಿತ್ಯ ನಡೆಯುವ ಸಾಮೂಹಿಕ ಪ್ರಾರ್ಥನೆಯನ್ನು ಬಯಲಿನಲ್ಲಿ ಮಾಡಬೇಕಾಗಿದೆ. ಅದಕ್ಕಾಗಿ ಒಂದು ಪ್ರಾರ್ಥನಾ ಮಂದಿರದ ಅಗತ್ಯವನ್ನು ಒತ್ತಿ ಹೇಳಿದರು.

ಡಾ. ಕೆ.ಎಸ್. ಜಗದೀಶ್ ಅವರು 'ಸಿದ್ಧಗಂಗಾ ಮಠದ ಸಂಪೂರ್ಣ ವಿವರಗಳನ್ನು ವೆಬ್ ಸೈಟ್‌ಗೆ ಅಳವಡಿಸಿದರೆ, ವಿದೇಶದಲ್ಲಿರುವವರು ಮಠದ ಸೇವೆಯನ್ನು ಗಮನಿಸಿ, ಪ್ರೇರಿತರಾಗಿ ಬಡ ವಿದ್ಯಾರ್ಥಿಗಳನ್ನು ದತ್ತು ತೆಗೆದುಕೊಂಡು ಅವರ ಶಿಕ್ಷಣದ ಜವಾಬ್ದಾರಿಯನ್ನು ಹೊರಬಹುದು. ಅಲ್ಲದೆ ಶ್ರೀಮಠದ ಕಾರ್ಯಚಟುವಟಿಕೆಗಳನ್ನು ಸಿ.ಡಿ.ಗೆ ಅಳವಡಿಸಿದರೆ ವಿದೇಶಗಳಿಂದಲೂ ಉತ್ತಮ ಪ್ರತಿಕ್ರಿಯೆ ಬರುತ್ತದೆ ಎಂದು ತಿಳಿಸಿದರು.

ಶ್ರೀಕ್ಷೇತ್ರದ ಕಿರಿಯ ಶ್ರೀಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಪರಮಪೂಜ್ಯ ಶ್ರೀಶ್ರೀಗಳವರಿಗೆ ನೀವೆಲ್ಲರೂ ಅಮೂಲ್ಯ ನಿಧಿಗಳಿದ್ದಂತೆ. ನೀವೆಲ್ಲ ಇಲ್ಲಿ ಒಂದೆಡೆ ಸೇರಿದುದು ಶ್ರೀಶ್ರೀಗಳವರಿಗೆ ಸಂತೋಷವನ್ನುಂಟುಮಾಡಿದೆ ಎಂದು ತಿಳಿಸಿದರು.





ಸಿದ್ದಗಂಗಾ ಮಾಸಪತ್ರಿಕೆಗೆ ಹೆಚ್ಚಾಗಿ ಆಜೀವ ಚಂದಾದಾರರನ್ನು ಮಾಡಿಸಿದವರನ್ನು ಈ ಸಂದರ್ಭದಲ್ಲಿ ಕಿರಿಯ ಶ್ರೀ ಶ್ರೀಗಳವರು ಸತ್ಕರಿಸಿದರು.

ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಾ, 'ಇವತ್ತಿನ ದೃಶ್ಯ ತುಂಬಾ ಸಂತೋಷದಾಯಕವಾಗಿದೆ. ಕಳೆದ ವರ್ಷಕ್ಕಿಂತ ಹೆಚ್ಚು ಜನ ಸೇರಿದ್ದೀರಿ. ಸಿದ್ಧಗಂಗಾ ಮಾಸಪತ್ರಿಕೆ ಉತ್ತಮ ರೀತಿಯಲ್ಲಿ ಬರುತ್ತಿದೆ. ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ವ್ಯವಸ್ಥಿತವಾಗಿ ನಡೆದುಕೊಂಡು ಬರುತ್ತಿದೆ. ಹಳೆಯ ವಿದ್ಯಾರ್ಥಿಗಳ ಸಂಘದ ಈ ಎರಡೂ ಕಾರ್ಯಚಟುವಟಿಕೆಗಳು ಯಶಸ್ವಿಯಾಗಲು ನೀವೆಲ್ಲಾ ಸಹಕಾರ ನೀಡುತ್ತಿದ್ದೀರಿ' ಎಂದು ತಿಳಿಸಿದ ಶ್ರೀಗಳವರು ಮಠ ಬೆಳೆದು ಬಂದ ರೀತಿಯನ್ನು ಪ್ರಸ್ತಾಪಿಸಿ 'ಈ ಮಠ ಬೇರೆ ಮಠಗಳಿಗಿಂತ ಭಿನ್ನವಾಗಿದೆ. ಮೊದಲಿನಿಂದಲೂ ಈ ಮಠಕ್ಕೆ ಯಾವುದೇ ರೀತಿಯ ಆಸ್ತಿ, ಆದಾಯವಿರಲಿಲ್ಲ. ಗುರುಗಳ ಆಶೀರ್ವಾದದಿಂದ ನಡೆದುಕೊಂಡು ಬರುತ್ತಿದೆ. ವರ್ಷದಿಂದ ವರ್ಷಕ್ಕೆ ವಿದ್ಯಾರ್ಥಿಗಳ ಸಂಖ್ಯೆ ಬೆಳೆಯುತ್ತಿದೆ. ಅವರಿಗೆ ಎಲ್ಲ ರೀತಿಯ ಅನುಕೂಲಗಳನ್ನು ಒದಗಿಸಲು ಸಾಧ್ಯವಾಗಿಲ್ಲ. ವಸತಿ ಸಮಸ್ಯೆ ನೈರ್ಮಲ್ಯ ಸಮಸ್ಯೆಯನ್ನು ಬಗೆಹರಿಸಬೇಕಾಗಿದೆ. ಇಲ್ಲಿರುವ ಮಕ್ಕಳು ತುಂಬಾ ಬಡತನದ ಕುಟುಂಬಗಳಿಂದ ಬಂದವರು. ಅವರಿಗೆ ಉತ್ತಮ ವಾತಾವರಣ, ಉತ್ತಮ ರೀತಿಯ ಸೌಲಭ್ಯಗಳನ್ನು ಒದಗಿಸಿಕೊಡಬೇಕಾಗಿದೆ. ಅವರಿಗೆ ಉತ್ತಮ ಶಿಕ್ಷಣವನ್ನು ನೀಡಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡಬೇಕಾಗಿದೆ. ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಯಾವುದೇ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದರೂ ಉತ್ತಮ ರೀತಿಯಲ್ಲಿ ಜೀವನ ನಡೆಸುತ್ತಿರುವುದು ನಮಗೆ ಸಂತೋಷವನ್ನುಂಟು ಮಾಡಿದೆ' ಎಂದು ತಿಳಿಸಿದರು. (ಶ್ರೀಶ್ರೀಗಳವರು ಮಾಡಿದ ಆಶೀರ್ವಚನದ ಆಯ್ದ ಭಾಗವನ್ನು ಈ ಸಂಚಿಕೆಯ ಪುಟ 3ರಲ್ಲಿ 'ಶ್ರೀವಾಣಿ' ಶೀರ್ಷಿಕೆಯಡಿಯಲ್ಲಿ ನೀಡಲಾಗಿದೆ).

ಕೊನೆಯಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ಸಮಿತಿಯ ಸಹಕಾರ್ಯದರ್ಶಿಗಳಾದ ಶ್ರೀ ಕೆ. ವೀರಭದ್ರಯ್ಯ ಅವರು ವಂದನೆಗಳನ್ನು ಸಲ್ಲಿಸಿದರು.

## ಕಾಯಕ ದಾಸೋಹ

ಪೂಜ್ಯ ಡಾ. ಶಿವಕುಮಾರ ಸ್ವಾಮೀಜಿಯವರ ಕಾಯಕ - ದಾಸೋಹ ಕಾರ್ಯ ಅಪೂರ್ವವಾಗಿದೆ, ಕಾಯಕ-ದಾಸೋಹ ಶಬ್ದಗಳ ತಿರುಳುಗಳನ್ನರಿಯಬೇಕು ಎನ್ನುವವರು ಸಿದ್ಧಗಂಗೆಗೆ ಹೋಗಬೇಕು. ಒಂದಿ ದಿನ ಪೂಜ್ಯರ ಕಾರ್ಯವೈಖರಿಯನ್ನು ಕಾಣಬೇಕು, ಏಳು ಸಾವಿರ ವಿದ್ಯಾರ್ಥಿಗಳು, ನಾಲ್ಕು ಸಾವಿರ ಭಕ್ತರಿಗೆ ನಿತ್ಯ ಅನ್ನದಾಸೋಹ ನಡೆಸುತ್ತಿರುವುದನ್ನು ನೋಡಬೇಕು. ಆಗ ಆ ಶಬ್ದಗಳ ಅರ್ಥವಾಗುತ್ತದೆ. ವಿಜ್ಞಾನಯುಗದಲ್ಲಿ ಪವಾಡಸದೃಶ ಕಾರ್ಯ ನಡೆಯುತ್ತಿರುವುದನ್ನು ಕಂಡವರು ಮೂಕವಿಸ್ಮಿತರಾಗುತ್ತಾರೆ. ಸಿದ್ಧಗಂಗಾಮಠ ಲಕ್ಷಗಟ್ಟಲೆ ಆಸ್ತಿಯಿದ್ದ ಮಠವಲ್ಲ, ಪೂಜ್ಯರು ಮಠದ ಆಸ್ತಿಯಿಂದ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದವರಲ್ಲ. ಮಹಾ ತಪಸ್ವಿಗಳಾದ, ಹಿಂದಿನ ಪೀಠಾಧಿಕಾರಿ ಉದ್ದಾನ ಶಿವಯೋಗಿಗಳವರ ಕರಸಂಜಾತರು. ಉದ್ದಾನ ಶಿವಯೋಗಿಗಳವರು ಮಹಾ ದಾರ್ಶನಿಕರು. ತಮ್ಮ ಅಂತಶ್ಚಕ್ಷುವಿನ ಮೂಲಕ, ಶ್ರೀ ಶಿವಕುಮಾರ ಸ್ವಾಮೀಜಿಯವರ ದಿವ್ಯಚೇತನವನ್ನರಿತಿದ್ದರು. ಆದರೂ ಅವರಿಗೆ ಲೋಕಾನುಭವವಾಗಬೇಕೆಂದು ೧೯೩೮ ರಿಂದ ೪೧ರವರೆಗೆ ದಾಸೋಹ ಕಾರ್ಯವನ್ನೊಪ್ಪಿಸಿ ಹಲವಾರು ಬಗೆಯಿಂದ ಅವರನ್ನು ಪರೀಕ್ಷಿಸಿ, ಒರೆಗೆ ಹಚ್ಚಿ, ಚೊಕ್ಕ ಚಿನ್ನವನ್ನು ಮಾಡಿ ನಾಡಿಗಿತ್ತರು. ಪೂಜ್ಯ ರಾಮಕೃಷ್ಣ ಪರಮಹಂಸರು ಐಕ್ಯರಾಗುವಾದ ತಮ್ಮ ಆಧ್ಯಾತ್ಮ ಶಕ್ತಿಯನ್ನು ಸ್ವಾಮಿ ವಿವೇಕಾನಂದರಿಗಿತ್ತರಂತೆ. ಶ್ರೀ ಉದ್ದಾನ ಶಿವಯೋಗಿಗಳು ತಮ್ಮ ಆಧ್ಯಾತ್ಮ ಶಕ್ತಿಯನ್ನು ಶ್ರೀ ಶಿವಕುಮಾರ ಸ್ವಾಮೀಜಿಯವರಿಗೆ ಧಾರೆ ಎರೆದರು. ಗುರುಕೃಪೆ, ತಪೋಭೂಮಿ, ಶಿವಕುಮಾರ ಸ್ವಾಮೀಜಿಯವರ ಕಾಯಕ ನಿಷ್ಠೆ, ದಾಸೋಹಂಭಾವಗಳು ಒಂದುಗೂಡಿದುದರಿಂದ, ಇಲ್ಲಿ 'ಕಾಯಕವೇ ಕೈಲಾಸ'ವಾಗಿದೆ. ಶಿಕ್ಷಣ ದಾಸೋಹ, ಜ್ಞಾನದಾಸೋಹ, ಅನ್ನದಾಸೋಹಗಳೆಂಬ ತ್ರಿವಿಧ ದಾಸೋಹಗಳು ನದಿಯ ಪ್ರವಾಹದಂತೆ ಸಾಗಿದೆ.

*- ಶಾಂತಾದೇವಿ ಸ. ಮಾಳವಾಡ*

## ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ನೆನಪಿನ ಕ್ರೀಡಾಕೂಟ



ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ನೆನಪಿನ ಕ್ರೀಡಾಕೂಟದಲ್ಲಿ ಪ್ರಥಮ ಬಹುಮಾನ ಪಡೆದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತೋಟಗೆರೆ ಶ್ರೀ ಬಸವೇಶ್ವರ ಪ್ರೌಢಶಾಲೆ ವಿದ್ಯಾರ್ಥಿನಿಯರು ಮತ್ತು ಶಿಕ್ಷಕರು - ಪರಮ ಪೂಜ್ಯ ಶ್ರೀ ಶ್ರೀಗಳೊಂದಿಗೆ



ಪರಮ ಪೂಜ್ಯ ಶ್ರೀ ಶ್ರೀಗಳವರೊಂದಿಗೆ ದ್ವಿತೀಯ ಬಹುಮಾನ ಪಡೆದ ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು ಶುಕ್ರವಾರ ಸಂತೆಯ ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲಾ ವಿದ್ಯಾರ್ಥಿನಿಯರು ಹಾಗೂ ಶಿಕ್ಷಕರು.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೫೫. | **ಡಾ: ರಾಜಶೇಖರ್, ತಿಪ್ಪಣ್ಣ ಪವಾಡ ಶೆಟ್ಟರ್**<br>ಶಿವಶ್ರೀ, ೩ನೇ ಸಿದ್ಧಲಿಂಗ ನಗರ,<br>ಮುಳಗುಂದ ರೋಡು, ಗದಗ-೫೮೨೧೦೧ | ೨,೧೦೦-೦೦ |
| ೩೫೬. | **ಚಳ್ಳಕೆರೆ ಲಿಂ : ಡಾ: ತಿಪ್ಪೇಸ್ವಾಮಿ,**<br>ನಿ: ಪ್ರಾಂಶುಪಾಲರು, ಶ್ರೀ ಸಿದ್ಧಗಂಗಾ ಕಾಲೇಜು<br>ತುಮಕೂರು. (ಮಾತೃಕೃಪ, ತ್ಯಾಗರಾಜನಗರ<br>ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ) | ೫,೦೦೦-೦೦ |
| ೩೫೭. | **ಶ್ರೀ ಜೆ.ವಿ. ಹಳೆಮನಿ,**<br>ಇಂಗಳಹಳ್ಳಿ ಗ್ರಾಮ ಮತ್ತು ಅಂಚೆ<br>ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ-೫೮೧೨೩೧ | ೨,೧೦೧-೦೦ |
| ೩೫೮. | **ಶ್ರೀಮತಿ ಲೇ: ಮಾಟಂ ಗೌರಮ್ಮನಂಜಯ್ಯ**<br>ಶಿವಯೋಗನಂದ ಗುರುಕುಲ ಆಶ್ರಮ,<br>ಗುಡ್ಡದಹಳ್ಳಿ, ಮಡಕಶಿರ ತಾಲ್ಲೂಕು.<br>ಗುಡ್ಡದಹಳ್ಳಿ, ಅನಂತಪುರ ಜಿಲ್ಲೆ. ಆಂಧ್ರ ಪ್ರದೇಶ | ೨,೦೦೧-೦೦ |
| ೩೫೯. | **ಶ್ರೀ ಕೆ. ಎನ್. ಚನ್ನಬಸವಯ್ಯ,**<br>ಕಗ್ಗೆರೆ, ದೊಡ್ಡನಾರವಂಗಲ ಅಂಚೆ,<br>ತುಮಕೂರು ತಾಲ್ಲೂಕು. | ೧,೦೦೧-೦೦<br>(೧ನೇ ಕಂತು) |
| ೩೬೦. | **ಶ್ರೀ ಕೆ.ಸಿ. ಚಂದ್ರಯ್ಯ**<br>ಕಗ್ಗೆರೆ, ದೊಡ್ಡನಾರವಂಗಲ ಅಂಚೆ,<br>ತುಮಕೂರು ತಾಲ್ಲೂಕು. | ೧,೦೦೧-೦೦<br>(೧ನೇ ಕಂತು) |
| ೩೬೧. | **ಶ್ರೀ ಎ. ಎಸ್. ಜಯದೇವಯ್ಯ ಕಮಲ**<br>೧ನೇ ಕ್ರಾಸ್, ಸಿ.ಬಿ. ಬಡಾವಣೆ, ಉಪ್ಪಾರಹಳ್ಳಿ<br>ಸೋಮೇಶ್ವರಪುರಂ, ತುಮಕೂರು. | ೨,೫೦೦-೦೦ |
| ೩೬೨. | **ಶ್ರೀ ಸಿದ್ದವೀರಪ್ಪನವರು**<br>ತೊಂಡಗೆರೆ, ಹೆಬ್ಬೂರು ಹೋಬಳಿ<br>ತುಮಕೂರು ತಾಲ್ಲೂಕು. | ೧,೦೦೧-೦೦<br>(೧ನೇ ಕಂತು) |
| ೩೬೩. | **ಶ್ರೀ ಹೆಚ್.ಸಿ. ನಂಜುಂಡಯ್ಯ**<br>ಬಿನ್: ಚಿಕ್ಕನಂಜಪ್ಪ, ಅಂಚೆ ಕಛೇರಿ ಹಿಂಭಾಗ<br>ರೈಲ್ವೆ ನಿಲ್ದಾಣದ ರಸ್ತೆ, ಗುಬ್ಬಿ-೫೭೨೨೧೬<br>ತುಮಕೂರು ಜಿಲ್ಲೆ. | ೯೦೦-೦೦<br>(೧ನೇ ಕಂತು) |
| ೩೬೪. | **ಶ್ರೀ ಬಿ.ಆರ್. ಚೇತನ ಗೈರಿಶಂಕರ್**<br>ಬಿನ್ ಲೇ: ಪಿ.ಹೆಚ್ ರೇವಣ್ಣ,<br>ನಂ. ೬೩೪, ೪ನೇ ಮುಖ್ಯ ರಸ್ತೆ<br>ಬೆಂಗಳೂರು-೫೬೦೦೮೬ | ೨,೦೦೧-೦೦ |
| ೩೬೫. | **ಶ್ರೀ ವೀರಣ್ಣ**<br>ಸನ್ ಆಫ್ ಸಿದ್ದವೀರಪ್ಪ<br>ಮಧುಮಹೇಶ್ವರಿ ನಿಲಯ<br>೩ನೇ ಕ್ರಾಸ್, ೧ನೇ ಲಿಂಕ್ ರಸ್ತೆ<br>ವಿಶ್ವೇಶ್ವರಯ್ಯ ಬಡಾವಣೆ<br>ತುಮಕೂರು-೨. | ೧,೦೦೦-೦೦<br>(೨ನೇ ಕಂತು) |
| ೩೬೬. | **ಶ್ರೀಮತಿ ಪುಟ್ಟಮ್ಮ ಸಿದ್ದಲಿಂಗಯ್ಯ**<br>ಶಿಕ್ಷಕರು, ಕೇರಾಫ್ ನಂ. ೬೬೦೭<br>ಮಧುಮಹೇಶ್ವರಿ ನಿಲಯ<br>೩ನೇ ಕ್ರಾಸ್, ೧ನೇ ಲಿಂಕ್ ರಸ್ತೆ<br>ವಿಶ್ವೇಶ್ವರಯ್ಯ ಬಡಾವಣೆ, ತುಮಕೂರು-2. | ೧,೦೦೦-೦೦<br>(೨ನೇ ಕಂತು) |
| ೩೬೭. | **ಶ್ರೀಮತಿ ಪುಷ್ಪವತಮ್ಮ**<br>ಸನ್ ಆಫ್ ಎಂ.ಎಸ್. ಪರಮಶಿವಪ್ಪ<br>ರೇಣುಕ ಎಸ್ಟೇಟ್, ಅಂಕಿಹಳ್ಳಿ ಪೋಸ್ಟ್<br>ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ<br>ಪಿನ್‌ಕೋಡ್-೫೭೩೨೧೪. | ೨,೦೦೦-೦೦ |
| ೩೬೮. | **ಶ್ರೀ ಬಿ.ಬಿ. ಮಲ್ಲಣ್ಣ**<br>ಕಾಫಿ ಪ್ಲಾಂಟರ್, ಕೊಲಹಳ್ಳಿ ಎಸ್ಟೇಟ್<br>ಮಲಸಾಗರ ಅಂಚೆ, ಸಕಲೇಶಪುರ<br>ಹಾಸನ-೫೭೫೧೦೪. | ೧,೦೦೦-೦೦<br>(೨ನೇ ಕಂತು) |
| ೩೬೯. | **ಶ್ರೀಮತಿ ಗೋವಿಂದಮ್ಮ**<br>ಮದರ್ ಆಫ್ ಸಿ. ಮುನಿಸ್ವಾಮಿ ಮತ್ತು<br>ಸಿ. ರಾಮು, ಕಂಟ್ರಾಕ್ಟರ್, ನಂ. ೩೧೫೫, ೨ನೇ ಕ್ರಾಸ್<br>ಗಾಯತ್ರಿನಗರ, ಮರಿಯಪ್ಪನಪಾಳ್ಯ<br>ಬೆಂಗಳೂರು-೫೬೦೦೨೧. | ೧೦,೦೦೦-೦೦ |
| ೩೭೦. | **ಶ್ರೀ ಎನ್. ಸಿದ್ದಪ್ಪ ಅಂಡ್ ಸನ್ಸ್**<br>ಶ್ರೀ ಚನ್ನಬಸವೇಶ್ವರ ಚಿತ್ರ ಮಂದಿರ<br>ಆರುಡಿ, ದೊಡ್ಡಬಳ್ಳಾಪುರ ತಾಲ್ಲೂಕು<br>ಬೆಂಗಳೂರು ಜಿಲ್ಲೆ. | ೨,೦೨೫-೦೦ |

(ಮುಂದುವರಿಯುತ್ತದೆ)

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೨೬೪. | **ಶ್ರೀ ಎನ್.ಎಂ. ರೇವಣ್ಣಸಿದ್ದಪ್ಪ**<br>ನಂ. ೮೬, ೧ನೇ ಹಂತ, ೬ನೇ ಹಂತ<br>8ನೇ ಮುಖ್ಯ ರಸ್ತೆ, ಪಶ್ಚಿಮ ಕಾರ್ಡ್ ರಸ್ತೆ<br>ಬಸವೇಶ್ವರ ನಗರ,<br>ಬೆಂಗಳೂರು-೫೬೦೦೭೯. | ೧,೦೦೧-೦೦ |
| ೨೬೫. | **ಶ್ರೀ ಎ.ಸಿ. ಚಂದ್ರಪ್ಪ**<br>ಕ್ರೈಮ್ ಡ್ರೈವರ್, ವಿ.ಪಿ.ಎಸ್. (ಲಿ)<br>ನಂ. ೧೭೬ಬಿ, ಡಿ,ಡಬ್ಲ್ಯು.ಸಿ, ಭದ್ರಾವತಿ | ೧,೦೦೧-೦೦ |
| ೨೬೬. | **ಶ್ರೀ ಅಧ್ಯಕ್ಷರು ಮತ್ತು ಸದಸ್ಯರು**<br>ವಿಕ್ರಾಂತ್ ಬಸವ ಬಳಗ (ರಿ)<br>ನಂ. ೫೧೬, ೫ನೇ ಮುಖ್ಯ ರಸ್ತೆ,<br>೧ನೇ ಹಂತ, ಹೆಬ್ಬಾಳ<br>ಮೈಸೂರು. | ೧,೦೦೧-೦೦ |
| ೨೬೭. | **ಶ್ರೀ ಶಿವಪ್ರಾಸದ್ ಬಿನ್ ಶಿವರುದ್ರಪ್ಪ**<br>ಹೊಸಹೊಡ್ಯ, ಕೇಶವಾರ ಅಂಚೆ<br>ಚಿಕ್ಕಬಳ್ಳಾಪುರ ತಾಲ್ಲೂಕು<br>ಕೋಲಾರ ಜಿಲ್ಲೆ. | ೧,೧೦೧-೦೦ |
| ೨೬೮. | **ಶ್ರೀ ಸಿ.ಎಂ. ಮಾರ್ಕಂಡಪ್ಪ ಮತ್ತು ಸಹೋದರರು**<br>ವಕ್ಕಲೇರಿ ಮತ್ತು ಅಂಚೆ<br>ಮಾಲೂರು ತಾಲ್ಲೂಕು<br>ಕೋಲಾರ ಜಿಲ್ಲೆ. | ೧,೦೦೧-೦೦ |
| ೨೬೯. | **ಶ್ರೀ ಹೆಚ್.ಸಿ. ಬಸವರಾಜು**<br>ನಂ. ೪೧೮, ೭ನೇ ಮುಖ್ಯ ರಸ್ತೆ<br>ಮಲ್ಲೇಶ್ವರಂ ಪಶ್ಚಿಮ<br>ಬೆಂಗಳೂರು-೫೬೦೦೫೫. | ೨,೫೦೦-೦೦ |
| ೨೭೦. | **ಶ್ರೀ ಎಸ್. ಶಿವಕುಮಾರ್**<br>ನಂ. ೧೬, ''ಗಂಗಾಶ್ರೀ''<br>ಚಂದ್ರಮೌಳೇಶ್ವರ ಬಡಾವಣೆ<br>ಕ್ಯಾತ್ಸಂದ್ರ-೫೭೨೧೦೪<br>ತುಮಕೂರು ತಾಲ್ಲೂಕು | ೧,೧೦೧-೦೦ |
| ೨೭೧. | **ಶ್ರೀ ಕೆ.ಸಿ. ಚನ್ನಬಸವಾಚಾರಿ**<br>ಕೆರೆಬಂಡಿಪಾಳ್ಯ, ಕಲ್ಲೂರು ಅಂಚೆ<br>ಗುಬ್ಬಿ ತಾಲ್ಲೂಕು ಮತ್ತು ಜಿಲ್ಲೆ. | ೧,೦೦೨-೦೦ |
| ೨೭೨. | **ವಿದ್ವಾನ್ ಬಿ.ಎಸ್. ಪರ್ವತರಾಜು**<br>ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು<br>ಸಂಸ್ಕೃತ ವಿಭಾಗ<br>ಮರಿಮಲ್ಲಪ್ಪ ಪದವಿಪೂರ್ವ ಕಾಲೇಜು<br>ಮೈಸೂರು-೫೭೦೦೨೪. | ೧,೦೦೧-೦೦ |
| ೨೭೩. | **ಶ್ರೀ ಶಾಂತಮಲ್ಲಪ್ಪ**<br>ಶಿಕ್ಷಕರು, ಶ್ರೀ ಸಿದ್ಧಲಿಂಗೇಶ್ವರ ಬಡಾವಣೆ<br>ಬಸವಾಪಟ್ಟಣ ಮತ್ತು ಅಂಚೆ<br>ಅರಕಲಗೂಡು ತಾಲ್ಲೂಕು<br>ಹಾಸನ ಜಿಲ್ಲೆ - ೫೭೩೧೧೩ | ೧,೦೦೧-೦೦ |
| ೨೭೪. | **ಶ್ರೀ ತಿಪ್ಪೇಸಿದ್ದಯ್ಯ**<br>ಸಹ ಶಿಕ್ಷಕರು, ಎಂ.ಇ.ಎಸ್. ಹೈಸ್ಕೂಲು<br>೧೦ನೇ ಮುಖ್ಯ ರಸ್ತೆ<br>೪ನೇ ಬ್ಲಾಕ್, ಜಯನಗರ,<br>ಬೆಂಗಳೂರು-೫೬೦೦೧೧. | ೧,೦೦೧-೦೦ |
| ೨೭೫. | **ಶ್ರೀ ಬಿ. ನಂಜಪ್ಪ**<br>ಚನ್ನಾಪುರ ಮತ್ತು ಅಂಚೆ ಹರಪನಹಳ್ಳಿ<br>ಹೊಳೆನರಸೀಪುರ ತಾಲ್ಲೂಕು<br>ಹಾಸನ ಜಿಲ್ಲೆ. | ೧,೦೦೦-೦೦ |
| ೨೭೬. | **ಶ್ರೀಮತಿ ಸುನಂದಮ್ಮ**<br>**ಕೋಂ ಶ್ರೀ ವೆಂಕಟಸ್ವಾಮಯ್ಯ**<br>ನಂ. ೩೦೮, ಕಾವಲ್‌ಭೈರಸಂದ್ರ,<br>ಎಸ್.ಬಿ.ಎಂ. ಎದುರು<br>ಬೆಂಗಳೂರು-೫೬೦೦೩೨. | ೧,೧೦೧-೦೦ |
| ೨೭೭. | **ಶ್ರೀ ಆರ್. ಮುದ್ದುರಂಗಯ್ಯ**<br>**ಮತ್ತು ಶ್ರೀಮತಿ ಜಯಮ್ಮ**<br>ನಂ. ೯೭೮/ಎ, 4ನೇ 'ಇ' ಬ್ಲಾಕ್<br>೧೦ನೇ 'ಬಿ' ಮುಖ್ಯರಸ್ತೆ<br>60ನೇ ಕ್ರಾಸ್, ರಾಜಾಜಿನಗರ<br>ಬೆಂಗಳೂರು-೫೬೦೦೧೦. | ೧,೧೦೧-೦೦ |
| ೨೭೮. | **ಶ್ರೀ ಪಿ. ಚಂದ್ರಶೇಖರ್**<br>ಬಿ೧/೧೧, ಆನಂದಶ್ರಾಮ<br>೧೦ನೇ ಮುಖ್ಯ ರಸ್ತೆ, ೧೩ನೇ ಕ್ರಾಸ್<br>ಮಲ್ಲೇಶ್ವರಂ, ಬೆಂಗಳೂರು-೫೬೦೦೦೩. | ೨,೫೦೧-೦೦ |

(ಮುಂದುವರಿಯುತ್ತದೆ)

RNI No. 17139169
Siddaganga Monthly Reg. No. KRNQ-9

# ಸಿದ್ಧಗಂಗಾ 2001

॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



## ಜನವರಿ

| | | | | | |
|---|---|---|---|---|---|
| ಭಾ | | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | 31 |
| ಗು | 4 | 11 | 18 | 25 | |
| ಶು | 5 | 12 | 19 | 26 | |
| ಶ | 6 | 13 | 20 | 27 | |

## ಫೆಬ್ರವರಿ

| | | | | | |
|---|---|---|---|---|---|
| ಭಾ | | 4 | 11 | 18 | 25 |
| ಸೋ | | 5 | 12 | 19 | 26 |
| ಮಂ | | 6 | 13 | 20 | 27 |
| ಬು | | 7 | 14 | 21 | 28 |
| ಗು | 1 | 8 | 15 | 22 | |
| ಶು | 2 | 9 | 16 | 23 | |
| ಶ | 3 | 10 | 17 | 24 | |

## ಮಾರ್ಚ್

| | | | | | |
|---|---|---|---|---|---|
| ಭಾ | | 4 | 11 | 18 | 25 |
| ಸೋ | | 5 | 12 | 19 | 26 |
| ಮಂ | | 6 | 13 | 20 | 27 |
| ಬು | | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | 31 |

## ಏಪ್ರಿಲ್

| | | | | | |
|---|---|---|---|---|---|
| ಭಾ | 1 | 8 | 15 | 22 | 29 |
| ಸೋ | 2 | 9 | 16 | 23 | 30 |
| ಮಂ | 3 | 10 | 17 | 24 | |
| ಬು | 4 | 11 | 18 | 25 | |
| ಗು | 5 | 12 | 19 | 26 | |
| ಶು | 6 | 13 | 20 | 27 | |
| ಶ | 7 | 14 | 21 | 28 | |

## ಮೇ

| | | | | | |
|---|---|---|---|---|---|
| ಭಾ | | 6 | 13 | 20 | 27 |
| ಸೋ | | 7 | 14 | 21 | 28 |
| ಮಂ | 1 | 8 | 15 | 22 | 29 |
| ಬು | 2 | 9 | 16 | 23 | 30 |
| ಗು | 3 | 10 | 17 | 24 | 31 |
| ಶು | 4 | 11 | 18 | 25 | |
| ಶ | 5 | 12 | 19 | 26 | |

## ಜೂನ್

| | | | | | |
|---|---|---|---|---|---|
| ಭಾ | | 3 | 10 | 17 | 24 |
| ಸೋ | | 4 | 11 | 18 | 25 |
| ಮಂ | | 5 | 12 | 19 | 26 |
| ಬು | | 6 | 13 | 20 | 27 |
| ಗು | | 7 | 14 | 21 | 28 |
| ಶು | 1 | 8 | 15 | 22 | 29 |
| ಶ | 2 | 9 | 16 | 23 | 30 |

## ಜುಲೈ

| | | | | | |
|---|---|---|---|---|---|
| ಭಾ | 1 | 8 | 15 | 22 | 29 |
| ಸೋ | 2 | 9 | 16 | 23 | 30 |
| ಮಂ | 3 | 10 | 17 | 24 | 31 |
| ಬು | 4 | 11 | 18 | 25 | |
| ಗು | 5 | 12 | 19 | 26 | |
| ಶು | 6 | 13 | 20 | 27 | |
| ಶ | 7 | 14 | 21 | 28 | |

## ಆಗಸ್ಟ್

| | | | | | |
|---|---|---|---|---|---|
| ಭಾ | | 5 | 12 | 19 | 26 |
| ಸೋ | | 6 | 13 | 20 | 27 |
| ಮಂ | | 7 | 14 | 21 | 28 |
| ಬು | 1 | 8 | 15 | 22 | 29 |
| ಗು | 2 | 9 | 16 | 23 | 30 |
| ಶು | 3 | 10 | 17 | 24 | 31 |
| ಶ | 4 | 11 | 18 | 25 | |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | | 3 | 10 | 17 | 24 |
| ಮಂ | | 4 | 11 | 18 | 25 |
| ಬು | | 5 | 12 | 19 | 26 |
| ಗು | | 6 | 13 | 20 | 27 |
| ಶು | | 7 | 14 | 21 | 28 |
| ಶ | 1 | 8 | 15 | 22 | 29 |

## ಅಕ್ಟೋಬರ್

| | | | | | |
|---|---|---|---|---|---|
| ಭಾ | | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | 31 |
| ಗು | 4 | 11 | 18 | 25 | |
| ಶು | 5 | 12 | 19 | 26 | |
| ಶ | 6 | 13 | 20 | 27 | |

## ನವೆಂಬರ್

| | | | | | |
|---|---|---|---|---|---|
| ಭಾ | | 4 | 11 | 18 | 25 |
| ಸೋ | | 5 | 12 | 19 | 26 |
| ಮಂ | | 6 | 13 | 20 | 27 |
| ಬು | | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | |

## ಡಿಸೆಂಬರ್

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | 31 | 3 | 10 | 17 | 24 |
| ಮಂ | | 4 | 11 | 18 | 25 |
| ಬು | | 5 | 12 | 19 | 26 |
| ಗು | | 6 | 13 | 20 | 27 |
| ಶು | | 7 | 14 | 21 | 28 |
| ಶ | 1 | 8 | 15 | 22 | 29 |